KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ನವೆಂಬರ್ ೧, ೨೦೦೭ (ಕಾರ್ತೀಕ ೧೦, ಶಕ ವರ್ಷ ೧೯೨೯) | ಸಂಚಿಕೆ ೪೩ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಲೋಕೋಪಯೋಗಿ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಮಂಗಳೂರು ವಿಭಾಗ, ಮಂಗಳೂರು**

**ಅಲ್ಪಾವಧಿ ಟೆಂಡರ್ ಪ್ರಕಟಣೆ (ಮರು ಟೆಂಡರ್)**

**ಸಂಖ್ಯೆ:8:ಜಿಎನ್ಎಲ್:ಟಿಎನ್ಡಿ:2007-2008:ಜೆ೩-2, ದಿನಾಂಕ: 5ನೇ ಅಕ್ಟೋಬರ್ 2007**

2007-08ನೇ ಸಾಲಿನ ಆಯವ್ಯಯದಲ್ಲಿ ಸೇರಿರುವ ಈ ಕೆಳಗಿನ ಕಾಮಗಾರಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಪೆರನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್‌ಮೆಂಟ್ ಆ್ಯಕ್ಟ್ 2000ರ ಪ್ರಕಾರ ದ್ವಿಲಕೋಟಿ ಪದ್ಧತಿಯಲ್ಲಿ ಮೊಹರಾದ ಐಟಂ ದರ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಲಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ (ಫೈನಾನ್ಸಿಯಲ್) ಬಿಡ್ಡನ್ನು ಒಳಗೊಂಡಿದೆ. ಬಿಡ್‌ಗಳನ್ನು ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್ ಎಂದು ಗುರುತು ಹಾಕಿದ ಎರಡು ಪ್ರತ್ಯೇಕ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಈ ಎರಡು ಲಕೋಟೆಗಳಿಗೆ ಮೊಹರು ಮಾಡಿ ಕೆಲಸದ ಶಿರೋನಾಮೆ ನಮೂದಿಸಿ ಇನ್ನೊಂದು ಮೊಹರಾದ ಲಕೋಟೆಯಲ್ಲಿಡಬೇಕು ಮತ್ತು ಬಿಡ್ಡುದಾರರ ಹೆಸರು ಹಾಗೂ ಪೂರ್ತಿ ಅಂಚೆ ವಿಳಾಸದೊಂದಿಗೆ ಕೆಳಸಹಿದಾರರಿಗೆ ಕಳುಹಿಸಬೇಕು. ಪೂರ್ತಿಗೊಳಿಸಿದ ಬಿಡ್ಡನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ-2ರ ಫಾರಂನಲ್ಲಿ ಪಿಡಬ್ಲ್ಯೂಜಿ-65 ಹಾಗೂ 66 ರಲ್ಲಿ ಹಾಗೂ ಕರ್ನಾಟಕ ಟ್ರಾನ್ಸ್‌ಪೆರನ್ಸಿ ಇನ್ ಪಬ್ಲಿಕ್ ಪ್ರೋಕ್ಯೂರ್‌ಮೆಂಟ್ ಆ್ಯಕ್ಟ್ 2000ರಲ್ಲಿ ನಿರೂಪಿತ ಶರ್ತಗೊಳಪಟ್ಟು ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಸ್ವೀಕರಿಸುವರು. ಈ ಕೆಳಗೆ ಸೂಚಿತ ದಿನಾಂಕದಂದು ತಾಂತ್ರಿಕ ಬಿಡ್ಡನ್ನು ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾಗಿರುವ ಬಿಡ್‌ದಾರರ ವಿತ್ತೀಯ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು. ಈ ಕೆಳಗೆ ನಮೂದಿಸಿದ ಯಾವುದಾದರೂ ದಿನಾಂಕಗಳಂದು ಸಾರ್ವತ್ರಿಕ ರಜಾವಾದಲ್ಲಿ ಮುಂದಿನ ದಿನಾಂಕವನ್ನು ಪ್ರತ್ಯೇಕವಾಗಿ ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇಎಂಡಿ ಠೇವಣಿ (ರೂ. ಲಕ್ಷಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| 1 | ಸುಳ್ಯ ತಾಲ್ಲೂಕಿನ ಸುಳ್ಯದಲ್ಲಿ ಮಿನಿ ವಿಧಾನಸೌಧ ಕಟ್ಟಡ ರಚನೆ | 200.00 | ಒಂದನೇ ದರ್ಜೆ | 2.00 | 18 ತಿಂಗಳು | ದರವಾರು | ರೂ. 3300.00 |

**ಸಾಮಾನ್ಯ ನಿಯಮಗಳು:-**

1. ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ.) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಷನ್‌ನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಕೆಲಸದ ಬಿಡ್ಡಿಂಗ್‌ನಲ್ಲಿ ಆಸಕ್ತಿಯುಳ್ಳ

ಗುತ್ತಿಗೆದಾರರು ನಗದಾಗಿ ಅಥವಾ ಮಂಗಳೂರಿನಲ್ಲಿ ಪಾವತಿ ಆಗುವಂತೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರ ಹೆಸರಿಗೆ ಪಡೆದ ಡಿ.ಡಿ. ರೂಪದಲ್ಲಿ ಪಾವತಿಸಬೇಕಾದ ಟೆಂಡರ್ ಶೆಡ್ಯೂಲ್ ಮೌಲ್ಯದೊಂದಿಗೆ (ಇದನ್ನು ಹಿಂದಿರುಗಿಸುವುದಿಲ್ಲ) ಕೆಳ ಸಹಿದಾರರಿಗೆ ಅರ್ಜಿ ಸಲ್ಲಿಸಬೇಕು. ಅರ್ಜಿ ಜೊತೆ ಗುತ್ತಿಗೆದಾರರ ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿಯೊಂದಿಗೆ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್./ ಕಾಲ್‌ಡೆಪೋಸಿಟ್, ಬ್ಯಾಂಕ್ ಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿಯನ್ನು ಕೆಳ ಸಹಿದಾರರ ಹೆಸರಿಗೆ ಪ್ಲೆಜ್ ಮಾಡಬೇಕು) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.

2. ದಿನಾಂಕದ ವಿವರಗಳು ಈ ಕೆಳಕಂಡಂತಿದೆ:-
   (ಅ) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ:24.10.2007ರ ಕಛೇರಿ ಕೆಲಸದ ವೇಳೆಯಲ್ಲಿ
   (ಆ) ಖಾಲಿ ಟೆಂಡರು ಫಾರಂಗಳನ್ನು ಕೊಡುವ ದಿನಾಂಕ: 24.10.2007ರ ಕಛೇರಿ ಕೆಲಸದ ವೇಳೆಯಲ್ಲಿ
   (ಇ) ಟೆಂಡರು ಸಲ್ಲಿಸುವ ಕೊನೆಯ ದಿನಾಂಕ: 26.10.2007ರ ಅಪರಾಹ್ನ 4.00ರ ವರೆಗೆ
   (ಈ) ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ: 27.10.2007ರ ಪೂರ್ವಾಹ್ನ: 11.00ಕ್ಕೆ ಅಥವಾ ಮುಂದೆ ತಿಳಿಸಲಾಗುವ ಸಮಯ ಮತ್ತು ದಿನಾಂಕದಂದು.
3. ಕಾಮಗಾರಿ ಪೂರ್ತಿಗೊಳಿಸಿದ ಬಳಿಕ ಒಂದು ವರ್ಷದ ಕಾಲ ಯಾವುದೇ ದುರಸ್ತಿ ಕಾರ್ಯ ಬರಬಾರದು. ಈ ಮೇಲಿನಂತೆ ದುರಸ್ತಿ ಅವಧಿಯಲ್ಲಿ (ಡಿಫೆಕ್ಟ್ ಲಯಾಬಿಲಿಟಿ ಅವಧಿ) ಯಾವುದಾದರೂ ದುರಸ್ತಿ ಬೇಕಾದರೆ ಗುತ್ತಿಗೆದಾರ / ವಾಣಿಜ್ಯ ಸಂಸ್ಥೆ ಅದನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪುನರ್ ನಿರ್ಮಿಸಿಕೊಡಬೇಕು.
4. ಪ್ರತಿ ಟೆಂಡರುದಾರರು ಈ ಕೆಳಗೆ ನೀಡಲಾದಂತೆ ಯಂತ್ರೋಪಕರಣ ಸ್ವಂತ ಅಥವಾ ಬಾಡಿಗೆಗೆ ಹೊಂದಿದ್ದು, ಅವುಗಳ ಮಾಲಿಕತ್ವದ ಪುರಾವೆ ಲಗ್ತೀಕರಿಸಬೇಕು. ಪುರಾವೆ ರಹಿತವಾಗಿ ಸಲ್ಲಿಸಿದ ಟೆಂಡರುಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1 | ಕಾಂಕ್ರೀಟ್ ಮಿಕ್ಸರ್ | 3 | ಪರ್ಚೆಸ್ ಇನ್‌ವೈಸ್ ಪ್ರತಿ / ಸೇಲ್ ಡೀ ಡ್‌ನೊಂದಿಗೆ ಮೂಲ ಮಾರಾಟ ಮಾಡಿದವರ ಪರ್ಚೇಸ್ ಇನ್‌ವೈಸ್ ಪ್ರತಿ. |
| 2 | ನೀರಿನ ಪಂಪ್‌ಸೆಟ್ ಮತ್ತು ನೀರಿನ ಟ್ಯಾಂಕ್ | ತಲಾ 2 ನಂಬ್ರ | ಪರ್ಚೆಸ್ ಇನ್‌ವೈಸ್ ಪ್ರತಿ / ಸೇಲ್ ಡೀ ಡ್‌ನೊಂದಿಗೆ ಮೂಲ ಮಾರಾಟ ಮಾಡಿದವರ ಪರ್ಚೇಸ್ ಇನ್‌ವೈಸ್ ಪ್ರತಿ. |
| 3 | ಲಾರಿ ಮತ್ತು ಟಿಪ್ಪರ್‌ಗಳು | 4 | ಆರ್.ಟಿ.ಓ. ನೀಡಿದ ನೊಂದಣಿ ಪ್ರಮಾಣ ಪತ್ರದ ಪ್ರತಿ. |
| 4 | ಸ್ಟೀಲ್ ಫಾರ್ಮ್ ವರ್ಕ್ | 1500 ಚ.ಮೀ. | - |
| 5 | ಸೆಂಟರಿಂಗ್ ಪ್ಲೇಟ್‌ಗಳು | 800 ಚ.ಮೀ. | - |
| 6 | ಕಾಮಗಾರಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಲು ಅವಶ್ಯವಿರುವ ಇನ್ನಿತರ ಯಂತ್ರೋಪಕರಣಗಳು | | |

5. ಟೆಂಡರಿನಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ಉದ್ದೇಶಿಸಿರುವ ಕಾಮಗಾರಿಯ ಶೇ. 30 ರಷ್ಟು ಮೊತ್ತದ ಇದೇ ತರಹದ: ಕಾಮಗಾರಿಯನ್ನು ಕಳೆದ ಐದು ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತ ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
6. ಕಾಮಗಾರಿ ನಿರ್ವಹಿಸುವುದಕ್ಕಾಗಿ, ಬೇಕಾದ ಆರ್ಥಿಕ ಸಾಮರ್ಥ್ಯವನ್ನು ಹೊಂದಿರುವ ಬಗ್ಗೆ ಟೆಂಡರ್ ಮೊಬಲಗಿನ ಶೇ. 30ಕ್ಕೆ ಸಮನಾದ ಮೊಬಲಗಿನ (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ) ಲೈನ್ ಆಫ್ ಕ್ರೆಡಿಟ್‌ನ್ನು ತಪ್ಪದೆ ನೀಡಬೇಕು.
7. ತಾಂತ್ರಿಕ ಬಿಡ್‌ಗಳ ಪುರಾವೆಯಾಗಿ ಲಗ್ತೀಕೃತ ಎಲ್ಲಾ ದಾಖಲೆಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಿಂತ ಕೆಳಗಿಲ್ಲದ ಶ್ರೇಣಿಯ ಗೆಜೆಟೆಡ್ ಅಧಿಕಾರಿಯವರಿಂದ ದೃಢೀಕರಿಸಿ ಸಲ್ಲಿಸಬೇಕು. ತಪ್ಪಿದರೆ ಬಿಡ್‌ಗಳನ್ನು ಅನರ್ಹಗೊಳಿಸಲಾಗುತ್ತದೆ. ಮೂಲ ದಾಖಲೆಗಳನ್ನು ಯಾವುದೇ ಹಂತದಲ್ಲಿ ಪರಿಶೀಲನಾರ್ಥವಾಗಿ ಕೇಳಿದಾಗ ಹಾಜರುಪಡಿಸಬೇಕು. ಮೂಲ ದಾಖಲೆಗಳನ್ನು ನೀಡಲು ತಪ್ಪಿದರೆ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತದೆ.
8. ತಾಂತ್ರಿಕ ಬಿಡ್‌ನೊಂದಿಗೆ ಸಮಂಜಸವಾದ (ರಿಲೆವೆಂಡ್) ಪ್ರಮಾಣಪತ್ರಗಳು ಹಾಗೂ ವಿವರಗಳನ್ನು ಮಾತ್ರ ಲಗ್ತೀಕರಿಸಬೇಕು. ಕಂಪೆನಿ : ಏಜೆನ್ಸಿಗಳು / ವಾಣಿಜ್ಯ ಸಂಸ್ಥೆಗಳ : ಪ್ರೊಫೈಲ್ ವಿವರಗಳನ್ನು ಲಗ್ತೀಕರಿಸಬೇಕು.
9. ಜಂಟಿ ಸಹಭಾಗಿತ್ವದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
10. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
11. ಶರ್ತಬದ್ಧ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
12. ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಮುಗಿಸಬೇಕು. ತಪ್ಪಿದಲ್ಲಿ ನಿಯಮ ರೀತ್ಯಾ ದಂಡನಾ ಶುಲ್ಕ ತೆರಬೇಕಾಗುತ್ತದೆ.

13. ಗುತ್ತಿಗೆದಾರರು ಸಿಮೆಂಟ್, ಉಕ್ಕು ಹಾಗೂ ಕಾಮಗಾರಿಗಳಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳ ಸಂಗ್ರಹಕ್ಕೆ ತಮ್ಮ ಸ್ವಂತ ವ್ಯವಸ್ಥೆ ಮಾಡಿಕೊಳ್ಳಬೇಕು. ಇದನ್ನು ಕೆಲಸಕ್ಕೆ ಉಪಯೋಗಿಸುವ ಮೊದಲು ಗುಣನಿಯಂತ್ರಣ ಪರೀಕ್ಷೆಗೆ ಒಳಪಡಿಸಿ, ಫಲಿತಾಂಶವು ಐ.ಎಸ್.ಎಸ್. (I.S.S.) ಗುಣಮಟ್ಟಕ್ಕೆ ಸರಿಹೊಂದುವಂತಿರಬೇಕು. ಇದನ್ನು ಕೆಲಸದ ಎಲ್ಲಾ ಹಂತಗಳಲ್ಲಿ ಒದಗಿಸಬೇಕು.
14. ಯಶಸ್ವೀ ಟೆಂಡರುದಾರರು ನಿರ್ವಹಿಸಿರುವ ಕಾಮಗಾರಿ ಮೊತ್ತದ ಶೇಕಡಾ 1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂಖ್ಯೆ:ಯುಎಲ್‌ಡಿ-3:ಡಿಎಲ್‌ಇಡಿ 2006:ಬೆಂಗಳೂರು:ದಿನಾಂಕ:18.1.2007ರಂತೆ ಪಾವತಿಸತಕ್ಕದ್ದು.
15. ತಾಂತ್ರಿಕ ಬಿಡ್ಡು/ಆರ್ಥಿಕ ಬಿಡ್ಡನ್ನು ತೆರೆಯುವ ದಿನಾಂಕದಂದು ಗುತ್ತಿಗೆದಾರರು/ಅವರ ಪ್ರತಿನಿಧಿಯವರು ಟೆಂಡರಿನ ಜತೆ ಒದಗಿಸಲಾದ ಎಲ್ಲಾ ಮೂಲ ದಾಖಲೆಗಳೊಂದಿಗೆ ಹಾಜರಾಗತಕ್ಕದ್ದು.

ಕೆಲಸದ ಕುರಿತಾದ ಯಾವುದೇ ಇತರ ವಿವರವನ್ನು ಕಛೇರಿಯ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ.

ಕಾರ್ಯನಿರ್ವಾಹಕ ಇಂಜಿನಿಯರರು

ಪಿ.ಆರ್. 635 ಲೋ ಇ ಮಂಗಳೂರು ವಿಭಾಗ, ಮಂಗಳೂರು.

## WATER RESOURCES DEPARTMENT
## (Minor Irrigation)

**ಸಂಖ್ಯೆ:ಸನೀಇ 04 ಮಸಾವಿ 2007, ದಿನಾಂಕ: 29ನೇ ಸೆಪ್ಟೆಂಬರ್ 2007**

## STATE TENDER BULLETIN

The details of the notices inviting the tender in respect of the Procurement requirements of different procurement entities to be published as a part of the State - Tender Bulletin for the 5th week of sept 2007. The details of the published Tender Notification may be obtained from the concerned Executive Engineers who has invited the Tender.

**V. GOVINDARAJ**
State Tender Bulletin Officer and Deputy Secretary to
Government Water Resources Department (M.I.)

## ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ
## ಟೆಂಡರ್ ಪ್ರಕಟಣೆ (ದ್ವಿ-ಲಕೋಟೆ ಪದ್ಧತಿ)

**ಟೆಂಡರ್ ಪ್ರಕಟಣೆ ಸಂಖ್ಯೆ:10/2007-08, ದಿನಾಂಕ: 25ನೇ ಸೆಪ್ಟೆಂಬರ್ 2007**

**ಸಂ: ಕಾಪಾಇಂ:ಸನೀವಿ:ಶಿ:ಸಇಂ-2:4702-ಟೆಂಡರ್:ಸೇತುವೆಗಳು:2007-08:1569 ದಿನಾಂಕ: 25ನೇ ಸೆಪ್ಟೆಂಬರ್ 2007**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಅರ್ಹ ದರ್ಜೆ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಐಟಂವಾರು ಟೆಂಡರ್ ಅನ್ನು ದ್ವಿ-ಲಕೋಟೆ ಪದ್ಧತಿಯಲ್ಲಿ, ದ್ವಿ ಪ್ರತಿಗಳಲ್ಲಿ ಮೊಹರು ಮಾಡಲಾದ ಹಾಗೂ ಕಾಮಗಾರಿಯ ಹೆಸರನ್ನು ಸ್ಪಷ್ಟವಾಗಿ ಮೇಲೆ ನಮೂದಿಸಲಾದ ಲಕೋಟೆಯಲ್ಲಿ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-1999, 2000 ಮತ್ತು ಆ್ಯಕ್ಟ್-2000ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ, ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

1. ಗುತ್ತಿಗೆದಾರರು ತಾಂತ್ರಿಕ ಬಿಡ್‌ಅನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.
2. ಗುತ್ತಿಗೆದಾರರು ಆರ್ಥಿಕ ಬಿಡ್‌ಅನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಲಕೋಟೆ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ, ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದ ಕಾರ್ಯಾಲಯದಲ್ಲಿ ಈ ಕೆಳಗೆ ಸೂಚಿಸಿದ ದಿನಾಂಕದಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್ ಈ ಕೆಳಗೆ ಸಹಿ ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರ್‌ದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ದಿನಾಂಕವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದೂ ಅರ್ಥೈಸಿಕೊಳ್ಳತಕ್ಕದ್ದು.

ತಾಂತ್ರಿಕ ಬಿಡ್‌ಅನ್ನು ಮೊದಲು (ಸಾಧ್ಯವಾದರೆ ಟೆಂಡರ್ ಸ್ವೀಕರಿಸುವ ದಿನಾಂಕದಂದೇ) ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ಲಿಖಿತವಾಗಿ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹವಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ, ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

1. ಟೆಂಡರ್ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 05.11.2007ರ ಸಂಜೆ 5.00 ಗಂಟೆಯವರೆಗೆ

2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ಕೊನೆಯ ದಿನಾಂಕ: 20.11.2007ರ ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು.

3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಒಳಗೊಂಡಂತೆ) 30.11.2007 ರ ಸಂಜೆ 4.00 ಗಂಟೆ ಒಳಗೆ ಸಲ್ಲಿಸುವುದು

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್ ಮೊತ್ತ (ರೂ. ಗಳಲ್ಲಿ) | ಈ.ಎಂ.ಡಿ. ಮೊತ್ತ (ರೂ. ಗಳಲ್ಲಿ) | ಖಾಲಿ ಟೆಂಡರ್ ಫಾರಂ ಬೆಲೆ (ಹಿಂದಿರುಗಿಸಲಾರ ದಂಥದ್ದು) ತೆರಿಗೆ ಸೇರಿ (ರೂ. ಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|---|
| 1. | ಶಿವಮೊಗ್ಗ ಜಿಲ್ಲೆ, ಸೊರಬ ತಾ।। ಗೋಂದಿ ಗ್ರಾಮದ ಹತ್ತಿರ ವರದಾ ನದಿಗೆ ಅಡ್ಡಲಾಗಿ ಬ್ಯಾರೇಜ ನಿರ್ಮಾಣ | 350,00,000=00 | 3,50,000=00 | 20,000/- | 1ನೇ ದರ್ಜೆ | 11 ತಿಂಗಳು |

**ಅರ್ಜಿ ಸಲ್ಲಿಸುವ ವಿಧಾನ:**

ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳ ಸಲುವಾಗಿ ಅರ್ಜಿ ಸಲ್ಲಿಸುವಾಗ ಈ ಕೆಳಗೆ ತೋರಿಸಿದ ಮೂಲ ಪ್ರಮಾಣ ಪತ್ರಗಳನ್ನು ತೋರಿಸಿ ಪರಿಶೀಲನೆಗೊಳಪಡಿಸಿ, ಅರ್ಜಿಯೊಂದಿಗೆ ನಕಲು ಪ್ರತಿಗಳನ್ನು ಲಗತ್ತಿಸುವುದು.

1. ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
2. ಇತ್ತೀಚಿನ ವರಮಾನ ತೆರಿಗೆಯ ಕ್ಲಿಯರೆನ್ಸ ಪ್ರಮಾಣ ಪತ್ರ.
3. ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯ ಕ್ಲಿಯರೆನ್ಸ ಪ್ರಮಾಣ ಪತ್ರ.
4. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳನ್ನು ಹೊಂದಿರಬೇಕು.
5. ಅಂಚೆ ಮೂಲಕ ಟೆಂಡರ್ ಪಡೆಯಬೇಕಾದಲ್ಲಿ ಟೆಂಡರ್ ಫಾರಂ ಬೆಲೆಗೆ ರೂ. 200.00 ಹೆಚ್ಚುವರಿಯಾಗಿ ಸೇರಿಸತಕ್ಕದ್ದು. ಅಂಚೆ ವಿಳಂಬ ಅಥವಾ ಖಾಲಿ ಟೆಂಡರ್ ಅರ್ಜಿದಾರರನ್ನು ಅಂಚೆ ಮೂಲಕ ತಲುಪುವ ಖಾತರಿಯನ್ನು ಈ ಇಲಾಖೆ ನೀಡುವುದಿಲ್ಲ.

**ಖಾಲಿ ಟೆಂಡರ್ ಫಾರಂಗಳಿಗೆ ಹಣ ಸಂದಾಯ ಮಾಡುವ ವಿಧಾನ:-**

ಡಿ.ಡಿ. ಅಥವಾ ಬ್ಯಾಂಕ್‌ನ ಚೆಕ್‌ನ್ನು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

**ಇ.ಎಂ.ಡಿ. ಸಲ್ಲಿಸುವ ವಿಧಾನ:-**

ನಿಗದಿತ ಇ.ಎಂ.ಡಿ. ಯನ್ನು ಕಡ್ಡಾಯವಾಗಿ ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ/ಪೇ ಆರ್ಡರ್/ಎಫ್.ಡಿ.ಆರ್ ಅಥವಾ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸಲ್ಲಿಸಬಹುದು. ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಸಲ್ಲಿಸಿದ್ದೇ ಆದಲ್ಲಿ ಗುತ್ತಿಗೆದಾರರು ಅವುಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರಬೇಕು. ಇ.ಎಂ.ಡಿ ಯನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ/ಪೇ ಆರ್ಡರ್/ ಎಫ್.ಡಿ.ಆರ್ ರೂಪದಲ್ಲಿ ಸಲ್ಲಿಸಿದರೆ, ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿರಬೇಕು. ಇ.ಎಂ.ಡಿ ಯನ್ನು ಟೆಕ್ನಿಕಲ್ ಬಿಡ್‌ನ ಲಕೋಟೆಯಲ್ಲಿ ಲಗತ್ತಿಸಿರಬೇಕು. ಯಾವುದೇ ಕಾರಣಕ್ಕೂ ಬ್ಯಾಂಕ್ ಗ್ಯಾರಂಟಿ ಪರಿಗಣಿಸುವುದಿಲ್ಲ. ಇ.ಎಂ.ಡಿ ಮಾನ್ಯತೆ, ಟೆಂಡರ್ ಸ್ವೀಕರಿಸಿದ ದಿನಾಂಕದಿಂದ 180 ದಿನಗಳ ಅವಧಿಗೆ ಹೊಂದಿರಬೇಕು.

**ತಾಂತ್ರಿಕ (ಟೆಕ್ನಿಕಲ್) ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:-**

1. ಇ.ಎಂ.ಡಿ.
2. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3 ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳ ವಿವರಗಳು.
3. ತಾಂತ್ರಿಕ ಬಿಡ್‌ನಲ್ಲಿರುವ ನಮೂನೆ (1) ರಿಂದ (8) ಗಳನ್ನು ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ದೃಢೀಕರಿಸಬೇಕು.

ಈ.ಎಂ.ಡಿ ರಹಿತ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.

**ಆರ್ಥಿಕ ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:-**

1. ಶೆಡ್ಯೂಲ್-ಬಿ ಯನ್ನು ದ್ವಿ-ಪ್ರತಿಯಲ್ಲಿ ಅಂಕಿ ಮತ್ತು ಅಕ್ಷರಗಳಲ್ಲಿ ದರಗಳನ್ನು ಹಾಗೂ ಈ ದರಗಳನ್ನು ಟೆಂಡರ್ ಪರಿಮಾಣದೊಂದಿಗೆ ಗುಣಿಸಿದಲ್ಲಿ ಒದಗುವ ಮೊತ್ತವನ್ನು ನಮೂದಿಸಿದಂತೆ ಸಲ್ಲಿಸಬೇಕು. ಯಾವುದೇ ತಿದ್ದುಪಡಿ ಮಾಡಿರುವುದನ್ನು ಗುತ್ತಿಗೆದಾರರು ಸಹಿಯೊಂದಿಗೆ ದೃಢೀಕರಿಸಬೇಕು.
2. ಪಿ.ಡಬ್ಲ್ಯೂ.ಜಿ-65 ಮತ್ತು 66 ಇವುಗಳನ್ನು ಹಾಗೂ ಇದರ ಅಡಕಗಳನ್ನು ಯಾವುದೇ ವಿವರಗಳಿಗಾಗಿ ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ಎಲ್ಲಾ ಪುಟಗಳ ಮೇಲೂ ಸಹಿ ಮಾಡಿರಬೇಕು.

**ಷರತ್ತುಗಳು:-**

1. ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೊಂದಣಿ ಪ್ರಮಾಣ ಪ್ರತಿ ಲಗತ್ತಿಸತಕ್ಕದ್ದು.
2. ಟೆಂಡರ್ ಪಡೆಯಲು ಅರ್ಹತೆಯಾಗಿ ಪ್ರತಿಯೊಬ್ಬ ಗುತ್ತಿಗೆದಾರರು ಕಳೆದ ಐದು ವರ್ಷಗಳಲ್ಲಿ.......

ಅ. ಕನಿಷ್ಠ ಎರಡು ಆರ್ಥಿಕ ವರ್ಷಗಳಲ್ಲಿ ಟೆಂಡರ್‌ಗಿಡಲಾದ ಅಂದಾಜು ಮೊತ್ತದ ಶೇ. 200 ರಷ್ಟಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ತರಹದ ಸಿವಿಲ್ ಕಾಮಗಾರಿಗಳ ನಿರ್ಮಾಣ) ವಾರ್ಷಿಕ ವಹಿವಾಟು ಮಾಡಿರಬೇಕು.

ಆ. ಇದೇ ತರಹದ, ಟೆಂಡರ್‌ಗಿಡಲಾದ ಅಂದಾಜು ಮೌಲ್ಯಕ್ಕೆ ಶೇ. 50 ರಷ್ಟಕ್ಕೆ ಕಡಿಮೆ ಇಲ್ಲದಂತೆ ಕನಿಷ್ಠ ಒಂದು ಕಾಮಗಾರಿಯನ್ನು ತೃಪ್ತಿಕರವಾಗಿ ಮುಗಿಸಿರಬೇಕು.

ಇ. ಯಾವುದೇ ಒಂದು ವರ್ಷದಲ್ಲಿ ಈ ಕೆಳಗೆ ಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| ಕ್ರ. ಸಂ. | ಕೆಲಸದ ವಿವರ | ಕನಿಷ್ಠ ಪರಿಮಾಣಗಳು |
|---|---|---|
| 1 | ಅಗೆತದ ಕೆಲಸ (ಘ.ಮೀ) | 5,000.00 |
| 2 | ಮಣ್ಣಿನ ಒಡ್ಡು (ಘ.ಮೀ) | 5,000.00 |
| 3 | ಸರಳು ಸಹಿತ ಮತ್ತು ಸರಳು ರಹಿತ ಕಾಂಕ್ರಿಟ್ ಕೆಲಸ (ಘ.ಮೀ) | 4,000.00 |

3. ಅರ್ಜಿದಾರರು ಪ್ರದರ್ಶಿಸಬೇಕಾಗಿರುವುದು..

ಅ) ಮುಖ್ಯವಾಗಿ ಹಾಗೂ ಮಹತ್ವವಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು ಹೊಂದಿರಬೇಕು (ಸ್ವಂತ ಅಥವಾ ಲೀಸ್ ಮೇಲೆ), ಲೀಸ್ ಆಗಿದ್ದಲ್ಲಿ ಜಿ.ಪಿ.ಎ ಹಾಗೂ ಮೂಲ ದಾಖಲಾತಿ ಒದಗಿಸಬೇಕು.

√ ಎಕ್ಸವೇಟರ್/ ಪೋಕ್ಲೇನ್ (0.90 ಘ.ಮೀ ಸಾಮರ್ಥ್ಯ) 2 ಸಂ.
√ ಲಾರಿಗಳು/ಟಿಪ್ಪರ್‌ಗಳು 5 ಸಂ.
√ ಕಾಂಕ್ರೀಟ್ ಮೆಷಿನ್ ಮಿಕ್ಸರ್ (10/7 ಘ.ಅ ಸಾಮರ್ಥ್ಯ) 4 ಸಂ.
√ ವೈಬ್ರೇಟರ್ 10 ಸಂ.
√ ಪಂಪ್ ಸೆಟ್ (5 ಹೆಚ್.ಪಿ) 4 ಸಂ.
√ ಪಂಪ್ ಸೆಟ್ (10 ಹೆಚ್.ಪಿ) 4 ಸಂ.
√ ಸೆಂಟ್ರಿಂಗ್ ಸಾಮಾಗ್ರಿಗಳು (ಕಾಂಕ್ರೀಟ್ ಕೆಲಸಕ್ಕೆ) 100 ಘ.ಮೀ ಪ್ರತಿ ದಿನಕ್ಕೆ

ಆ) ಇಂತಹದೇ ಯೋಜನೆ ನಿರ್ಮಾಣದ ಕನಿಷ್ಠ 5 ವರ್ಷ ಅನುಭವವುಳ್ಳ ಒಬ್ಬ ಸಿವಿಲ್ ಇಂಜಿನಿಯರಿಂಗ್ ಪದವಿ ಹೊಂದಿದ ಪ್ರಾಜೆಕ್ಟ್ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ತಾಂತ್ರಿಕ ಪರಿಣಿತರನ್ನು ಹೊಂದಿರಬೇಕು. ಪಂಪಿಂಗ್ ಮೆಷಿನರಿ ಕೆಲಸವನ್ನು ಪರಿಣಿತರಿಂದ ಮಾಡಿಸಬೇಕು.

ಇ) ಈ ಯೋಜನೆಗೆ ಬೇಕಾದ ಸಂಪನ್ಮೂಲ ಚರಾಸ್ತಿ ಮತ್ತು / ಅಥವಾ ಬ್ಯಾಂಕ್ ಕ್ರೆಡಿಟ್ ರೂಪದಲ್ಲಿ ಕನಿಷ್ಠ ರೂ. 200.00 ಲಕ್ಷಗಳ ಲಭ್ಯತೆ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್ ಲೈನ್ಸ್/ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು).

4. ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರೇ ಒದಗಿಸತಕ್ಕದ್ದು ಮತ್ತು ಇಲಾಖಾ ವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ. ಗುತ್ತಿಗೆದಾರರು ಭಾರತೀಯ ಮಾನಕ ಸಂಸ್ಥೆಯ ಗುಣಮಟ್ಟದ ಸಾಮಾಗ್ರಿಗಳನ್ನು ಉಪಯೋಗಿಸಬೇಕು. ಸಾಮಾಗ್ರಿಗಳ ಗುಣಮಟ್ಟವನ್ನು ಸಕ್ಷಮ ಗುಣನಿಯಂತ್ರಣ ಪ್ರಾಧಿಕಾರದವರಿಂದ ಪರೀಕ್ಷೆ ಮಾಡಿಸಿ ಗುಣಮಟ್ಟದ ಬಗ್ಗೆ ಪ್ರಮಾಣ ಪತ್ರ ಒದಗಿಸತಕ್ಕದ್ದು.

5. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೋಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸತಕ್ಕದ್ದು.

6. ಸತತವಾಗಿ ಮೂರು ಬಾರಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

7. ಕಾಮಗಾರಿಯನ್ನು ಉಪ-ಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.

8. ಈ ವಿಭಾಗದಲ್ಲಿ ಹಿಂದೆ ನಿಗದಿತ ಸಮಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸದ ಗುತ್ತಿಗೆದಾರರಿಂದ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

9. ಗುತ್ತಿಗೆದಾರರು ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪ್ರತಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು. ಕೆಲಸ ನಿರ್ವಹಿಸಲಾದ ಕುರಿತಾದ ಪ್ರಮಾಣ ಪತ್ರವನ್ನು ಕಾರ್ಯಪಾಲಕ ಇಂಜಿನಿಯರ್ ದರ್ಜೆಗೆ ಕಡಿಮೆ ಇರದ ಅಧಿಕಾರಿಯವರಿಂದ ಪಡೆದಂತೆ ಲಗತ್ತಿಸತಕ್ಕದ್ದು.

10. ರಾಜ್ಯ ಮಾರಾಟ ತೆರಿಗೆಯಲ್ಲಿ ನೋಂದಣಿ ಸೂಚಿಸಿರುವ ಬಗ್ಗೆ ನೋಂದಣಿ ಪ್ರತಿ ಹಾಗೂ ಆದಾಯ ತೆರಿಗೆ ತೀರುವಳಿ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

11. ಷರತ್ತುಗಳನ್ನೊಳಗೊಂಡ ಟೆಂಡರ್‌ನ್ನು ಪರಿಗಣಿಸುವುದಿಲ್ಲ.

12. ಟೆಂಡರ್ ಪ್ರಕಟಣೆಯಲ್ಲಿ ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು/ತಿಳಿಸಲಾಗುವುದು.

13. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಒಪ್ಪಿಕೊಳ್ಳುವ ಸಕ್ಷಮ ಪ್ರಾಧಿಕಾರ ಕಾಯ್ದಿರಿಸಿಕೊಂಡಿರುತ್ತದೆ ಹಾಗೂ ಅತೀ ಕನಿಷ್ಠ ಟೆಂಡರನ್ನೇ ಒಪ್ಪಿಕೊಳ್ಳಬೇಕಾದ ಅನಿವಾರ್ಯತೆ ಇರುವುದಿಲ್ಲ.
14. ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಲು ಸ್ಥಳಾವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.
15. ಅಂದಾಜು ದರಗಳ ಶೇ. 75 ಕ್ಕಿಂತ ಕಡಿಮೆ ದರವನ್ನು ಟೆಂಡರ್ ದರವಾಗಿ ನಮೂದಿಸಿದಲ್ಲಿ ಅಷ್ಟು ಮೊತ್ತಕ್ಕೆ "ಅಡಿಷನಲ್ ಪರ್‌ಫಾರ್ಮೆನ್ಸ್ ಸೆಕ್ಯೂರಿಟಿ" ಯನ್ನು ಯಶಸ್ವಿ ಗುತ್ತಿಗೆದಾರರು ಸಲ್ಲಿಸತಕ್ಕದ್ದು.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

**ಬಿ.ಹೆಚ್. ಯೋಗೇಶ್**
ಪಿ.ಆರ್. 636 ಕಾರ್ಯಪಾಲಕ ಇಂಜಿನಿಯರ್
ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ.

## ಔಷಧ ನಿಯಂತ್ರಣ ಇಲಾಖೆ

**ಪ್ರಾಂಶುಪಾಲರ ಕಚೇರಿ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ನಂ.2, ಪಿ. ಕಾಳಿಂಗರಾವ್ ರಸ್ತೆ, ಬೆಂಗಳೂರು-27**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ಔನಿಇ/ಸಔವಿಮವಿ/ಟಐಎ-ಟಎಎ/2007-08, ದಿನಾಂಕ: 6ನೇ ಅಕ್ಟೋಬರ್ 2007**

ಸದಸ್ಯ ಕಾರ್ಯದರ್ಶಿಗಳು, ಟೆಂಡರ್ ಆಹ್ವಾನಿಸುವ ಮತ್ತು ಅಂಗೀಕರಿಸುವ ಪ್ರಾಧಿಕಾರ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು-27 ಇವರು ಸದರಿ ವಿದ್ಯಾಸಂಸ್ಥೆಗೆ ಪ್ರಯೋಗಶಾಲಾ ಉಪಕರಣಗಳ ಖರೀದಿಗಾಗಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಉಪಕರಣಗಳ ವಿವರ ಮತ್ತು ಇಎಂಡಿ ಮೊತ್ತ ಈ ಕೆಳಗಿನಂತಿರುತ್ತದೆ.

| ಕ್ರ. ಸಂ. | ಉಪಕರಣಗಳ ಹೆಸರು | ಇ.ಎಂ.ಡಿ ಮೊತ್ತ ರೂ.ಗಳಲ್ಲಿ |
|---|---|---|
| 01 | ಹೈ ಪರ್ಫಾರ್ಮೆನ್ಸ್ ಥಿನ್ ಲೆಯರ್ ಕ್ರೊಮ್ಯಟೊಗ್ರಫಿ | 21000-00 |
| 02 | ಫ್ಲಾಶ್ ಕ್ರೊಮ್ಯಟೊಗ್ರಫಿ | 2200-00 |
| 03 | ವ್ಯಾಕೂಮ್ ಡಿಸ್ಟಿಲೇಷನ್ ಯುನಿಟ್ | 2000-00 |
| 04 | ಸ್ಟೆಬಿಲಿಟಿ ಛೇಂಬರ್ | 2600-00 |

ಟೆಂಡರ್ ಅರ್ಜಿಗಳನ್ನು ಸದರಿ ವಿದ್ಯಾಲಯದ ಕಚೇರಿಯಲ್ಲಿ ದಿನಾಂಕ:15.10.2007ರ ಬೆಳಿಗ್ಗೆ 11:00 ಗಂಟೆಯಿಂದ 14.11.2007ರ ಸಂಜೆ 4:00 ಗಂಟೆವರೆಗೆ, ನಿಗದಿತ ಅರ್ಜಿ ಶುಲ್ಕ ರೂ.338/- (ಸೇವಾ ತೆರಿಗೆ ಸಹಿತ) ನಗದಾಗಿ ಪಾವತಿಸಿ ಪಡೆಯಬಹುದಾಗಿದೆ. ಪೂರ್ಣವಾಗಿ ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಆಯಾ ಉಪಕರಣಗಳಿಗೆ ಸಂಬಂಧಿಸಿದ ಇ.ಎಂ.ಡಿ. ಮೊತ್ತದೊಂದಿಗೆ ದಿನಾಂಕ:16.11.07ರ ಶುಕ್ರವಾರ 4:00 ಗಂಟೆಯೊಳಗೆ ತಲುಪಿಸತಕ್ಕದ್ದು. ಪ್ರತಿಯೊಂದೂ ಉಪಕರಣಕ್ಕೂ ಪ್ರತ್ಯೇಕವಾಗಿ ಭರ್ತಿ ಮಾಡಿದ ಟೆಂಡರ್ ಫಾರಂಅನ್ನು ಕಚೇರಿಗೆ ತಲುಪಿಸತಕ್ಕದ್ದು. ಮೊಹರಾದ ಟೆಂಡರ್ ಫಾರಂಗಳನ್ನು ದಿನಾಂಕ:17.11.2007 ಶನಿವಾರ ಬೆಳಿಗ್ಗೆ 11:00 ಗಂಟೆಗೆ ತೆರೆಯಲಾಗುವುದು. ಟೆಂಡರ್ ಫಾರಂಗಳ ವಿತರಣೆ, ಸ್ವೀಕೃತಿ ಹಾಗೂ ತೆರೆಯುವಿಕೆ ಎಲ್ಲಾ ಪ್ರಕ್ರಿಯೆಗಳ ಪತ್ತಾ ಪ್ರಾಂಶುಪಾಲರ ಕಚೇರಿ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು-560027.

ಸದಸ್ಯ ಕಾರ್ಯದರ್ಶಿಗಳು,
ಪಿ.ಆರ್. 641 ಟೆಂಡರ್ ಆಹ್ವಾನಿಸುವ ಮತ್ತು ಅಂಗೀಕರಿಸುವ ಪ್ರಾಧಿಕಾರ, ಸರ್ಕಾರಿ
ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು-27

## ಲೋಕೋಪಯೋಗಿ ಇಲಾಖೆ

**ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ**

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**ನಂ. ಇಎನ್‌ಹೆಚ್ / ಚಿ / ಸ.ಇ-1 / ಟೆಂ.ಪ್ರ / ವಿ.ಕ. ಸ್ಥಳಾಂತರ / 07-08 / 2684 ದಿನಾಂಕ: 3ನೇ ಅಕ್ಟೋಬರ್ 2007**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಅರ್ಹ ಒಂದನೇ ದರ್ಜೆ ಎಲೆಕ್ಟ್ರಿಕಲ್ ಲೈಸನ್ಸ್‌ಡ್ (Class-I Licensed Electrical Contractor) ಗುತ್ತಿಗೆದಾರರಿಂದ ಬಿಡ್‌ಗಳನ್ನು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ: 5.11.2007 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ - 2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66 ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಭಂದನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ಬಿಡ್‌ಗಳನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ

ಕಛೇರಿಯಲ್ಲಿ ತೆರೆಯಲಾಗುವುದು. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ :: ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1 | ರಾಷ್ಟ್ರೀಯ ಹೆದ್ದಾರಿ-206ರ ತುಮಕೂರು-ಹೊನ್ನಾವರ ಸೆಕ್ಷನ್ಸ್‌ನ ಕಿ.ಮೀ. 194.50 ರಿಂದ 202.00 ರವರೆಗೆ ರಸ್ತೆ ಆಗಲೀಕರಣದ ಕಾಮಗಾರಿ (ವಿದ್ಯುತ್ ಕಂಬಗಳ ಸ್ಥಳಾಂತರ) | 7.60 | 15200-00 | ರೂ.1000 +12.5% ವ್ಯಾಟ್ | ವಿದ್ಯುತ್ ಕಂಬಗಳು ಮತ್ತು ಟ್ರಾನ್ಸ್ ಫಾರ್ಮ್ಸ್‌ಗಳ ಸ್ಥಳಾಂತರದ ಕಾಮಗಾರಿಗಳು | ಮೂರು ತಿಂಗಳು (ಮಳೆಗಾಲ ಸಹಿತ) |

**ಷರತ್ತುಗಳು:** 1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಅಭಿಯಂತರರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆದಾರರ ನೊಂದಾವಣಿ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಈ ಎಲ್ಲಾ ದಾಖಲೆಗಳನ್ನು, ಕಾರ್ಯನಿರ್ವಾಹಕ ಇಂಜಿನಿಯರ್‌ಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.**

| | | | |
|---|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಮತ್ತು ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ಕೊನೆಯ ದಿನಾಂಕ: | : | 03.11.2007 (ಕಛೇರಿ ವೇಳೆಯಲ್ಲಿ) |
| ಆ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ | : | 05.11.2007 ಮಧ್ಯಾಹ್ನ 4.00 ಗಂಟೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಸಮಯ |
| ಇ) | ಬಿಡ್‌ಗಳನ್ನು ತೆರೆಯುವ ದಿನಾಂಕ | : | 05.11.2007 ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು**

1) ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ:ಎಫ್.ಡಿ.ಆರ್.: ಪೇ ಆರ್ಡರ್ : ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ-66 ದಕ್ಕೆ ಅನುಗುಣವಾಗಿರತಕ್ಕದ್ದು.
2) ಪಿ.ಡಬ್ಲ್ಯೂ.ಜಿ.- 65 ಮತ್ತು 66 ರ ಎಲ್ಲಾ ನಿಬಂಧನೆಗಳೂ ಈ ಕಾಮಗಾರಿಗೆ ಅನ್ವಯಿಸುತ್ತವೆ.
3) ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಿಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು : ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ. : ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.
4) ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.

5) ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್ ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗಧಿಪಡಿಸಿದ ಪ್ರೋಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್ ಅನ್ನು" ಸಲ್ಲಿಸದಿದ್ದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ.
6) ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ:ಎಲ್‌ಡಿ/300/ಎಲ್ಇಟಿ/2006 ಬೆಂಗಳೂರು ದಿನಾಂಕ:18.1.2007 ಮತ್ತು ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ:ಲೋಇ/134/ಬಿಎಂಎಸ್/2007 ದಿನಾಂಕ: 27.07.2007ರನ್ವಯ ಗುತ್ತಿಗೆದಾರರಿಗೆ ಪಾವತಿಮಾಡುವ ಮೊತ್ತದ ಮೇಲೆ ಶೇಕಡ 1 ರಂತೆ ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಅಭಿವೃದ್ಧಿ ನಿಧಿಗಾಗಿ ಗುತ್ತಿಗೆದಾರ ಬಿಲ್ಲು ಮೊತ್ತದ ಮೇಲೆ ಕಟಾಯಿಸಿ ಸದರಿ ನಿಧಿಗೆ ಜಮಾ ಮಾಡಲಾಗುವುದು.
7) ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ಕಾರ್ಯನಿರ್ವಾಹಕ ಅಭಿಯಂತರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.
8) ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.
9) ಪಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
10) ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
11) ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
12) ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯಪಾಲಕ ಅಭಿಯಂತರರು,
ಪಿ.ಆರ್. 634 ರಾ.ಹೆ.ವಿಭಾಗ, ಚಿತ್ರದುರ್ಗ.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಸಾಮಾಜಿಕ ಅರಣ್ಯ ವಿಭಾಗ ತುಮಕೂರು**

**ಟೆಂಡರ್-ಕಂ-ಹರಾಜು ಪ್ರಕಟಣೆ**

**ಎ1:ಬಿಯುಡಿ:ನೀನೆತೋ:ಕತ್ರಾವಣೆ:ವಿವ:27/2006-07, ದಿನಾಂಕ: 1ನೇ ಅಕ್ಟೋಬರ್ 2007**

ಈ ಮೂಲಕ ನೋಂದಾಯಿತ ಅರಣ್ಯ ಗುತ್ತಿಗೆದಾರರಿಗೆ/ಸ್ಥಳೀಯ ಮಾರಾಟಗಾರರಿಗೆ ತಿಳಿಯಪಡಿಸುವುದೇನೆಂದರೆ ತುಮಕೂರು ಸಾಮಾಜಿಕ ಅರಣ್ಯ ವಿಭಾಗಕ್ಕೆ ಸಂಬಂಧಿಸಿದ ಈ ಕೆಳಕಂಡ ಸ್ಥಳಗಳಲ್ಲಿರುವ ನೀಲಗಿರಿ/ ಅಕೇಶಿಯ ಮರಗಳನ್ನು ಈ ಕೆಳ ಸಹಿ ಮಾಡಿರುವವರಾಗಲೀ ಅಥವಾ ಈ ಸಂಬಂಧವಾಗಿ ಅಧಿಕಾರ ಪಡೆದ ಇತರೆ ಅಧಿಕಾರಿಗಳಾಗಲೀ ಈ ಕೆಳಗೆ ನಮೂದಿಸಿರುವ ದಿನಾಂಕ ಹಾಗೂ ಸಮಯದಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಮಾಜಿಕ ಅರಣ್ಯ ವಿಭಾಗ ರವರ ಕಛೇರಿಯಲ್ಲಿ ಮರು ಟೆಂಡರ್-ಕಂ-ಹರಾಜು ಮೂಲಕ ಸಂಪೂರ್ಣ ಹರಾಜಿನ ಇಸ್ತಿಹಾರಿನ ಷರತ್ತುಗಳಿಗನುಸಾರವಾಗಿ ವಿಲೇ ಮಾಡಲಾಗುವುದು. ಇಚ್ಛೆಯುಳ್ಳ ನೋಂದಾಯಿತ ಅರಣ್ಯ ಗುತ್ತಿಗೆದಾರರು ಸದರಿ ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸಬಹುದು.

| ಯುನಿಟ್ ಸಂಖ್ಯೆ | ವಲಯ | ಗ್ರಾಮ ಪಂಚಾಯತಿ ಹೆಸರು | ಸ್ಥಳ | ವಿಸ್ತೀರ್ಣ (ಹೆ/ಕಿ.ಮೀ) | ಟೆಂಡರ್-ಕಂ-ಹರಾಜು ನಡೆಸುವ ದಿನಾಂಕ | ಮರಗಳ ಜಾತಿ |
|---|---|---|---|---|---|---|
| 1. | ತುಮಕೂರು | ನಾಗವಲ್ಲಿ | 1984-85ನೇ ಸಾಲಿನ ತಿಮ್ಮಸಂದ್ರ(ನಾಗವಲ್ಲಿ) ಗೋಮಾಳ ನೆಡುತೋಪು | 17 | 05.11.07 | ನೀಲಗಿರಿ/ಅಕೇಶಿಯಾ |

**ಟೆಂಡರ್ ವಿವರ**

| | | |
|---|---|---|
| 1) | ಟೆಂಡರ್ ಫಾರಂ ಮಾರಾಟ ದಿನಾಂಕ | ಮೇಲೆ ನಮೂದಿಸಿರುವ ದಿನಾಂಕಗಳಂದು ಬೆಳಿಗ್ಗೆ 10.00 ರಿಂದ 12.00 ಗಂಟೆಯವರೆಗೆ |
| 2) | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ಸಮಯ | ಮೇಲೆ ನಮೂದಿಸಿರುವ ದಿನಾಂಕಗಳಂದು ಮಧ್ಯಾಹ್ನ 2.00 ಗಂಟೆಯವರೆಗೆ |
| 3) | ಹರಾಜು ಮಾಡುವ ಹಾಗೂ ಟೆಂಡರ್ ತೆಗೆಯುವ ಸಮಯ | ಮೇಲೆ ನಮೂದಿಸಿರುವ ದಿನಾಂಕಗಳಂದು ಸಂಜೆ 5.00 ಗಂಟೆಯವರೆಗೆ |

ನಿಗದಿಪಡಿಸಿದ ದಿನಾಂಕಗಳಂದು ನಡೆಸುವ ಹರಾಜು ಹಾಗೂ ಟೆಂಡರ್‌ನಲ್ಲಿ ಬಿಡ್ಡುದಾರರು ಭಾಗವಹಿಸದೇ ಇದ್ದಲ್ಲಿ ಅಥವಾ ಬಿಡ್ಡುಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿದಲ್ಲಿ ಮರು ಹರಾಜನ್ನು ದಿನಾಂಕ:12.11.2007 ರಂದು ನಡೆಸಲಾಗುವುದು. ಈ ರೀತಿಯ ಮರು ಹರಾಜಿಗೆ ಪುನಃ ಯಾವುದೇ ಪ್ರಕಟಣೆ ನೀಡಲಾಗುವುದಿಲ್ಲ.

ಷರತ್ತುಗಳು

1. ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ, ತುಮಕೂರು ರವರ ಹೆಸರಿಗೆ ರೂ. 50000/- (ಐವತ್ತು ಸಾವಿರ)ಗಳ ಡಿ.ಡಿ.ಯನ್ನು ಸ್ಥಳೀಯ ರಾಷ್ಟ್ರೀಕೃತ ಬ್ಯಾಂಕಿನಿಂದ ತೆಗೆದು ಸಲ್ಲಿಸುವುದು.
2. ಟೆಂಡರ್ / ಹರಾಜನ್ನು ಸ್ಥಳವಾರು ಮಾಡಲಾಗುವುದು. ಬಿಡ್ಡುದಾರರು ಪ್ರತಿ ನೆಡುತೋಪಿಗೆ ಪ್ರತ್ಯೇಕವಾಗಿ ಟೆಂಡರ್ ಸಲ್ಲಿಸುವುದು.
3. ಬಿಡ್ಡು / ಟೆಂಡರ್‌ದಾರರು ಒಂದು ಯೂನಿಟ್‌ನಲ್ಲಿ ಬರುವ ಒಟ್ಟು ಮರಗಳಿಗೆ ದರವನ್ನು ಸೂಚಿಸತಕ್ಕದ್ದು.
4. ನೆಡುತೋಪಿನಲ್ಲಿರುವ ಮರಗಳು ಯಾವ ಸ್ಥಿತಿಯಲ್ಲಿರುತ್ತದೆಯೇ ಅದೇ ಸ್ಥಿತಿಯಲ್ಲಿ ಟೆಂಡರ್ ಮಾಡಲಾಗುವುದು.
5. ಸ್ಯಾಂಪಲ್ ಪ್ಲಾಟ್‌ಗಳನ್ನು ರಚಿಸಿದ ಮರಗಳ ಗಣತಿಯು ಅಂದಾಜಿನಂತಿರುತ್ತದೆ.
6. ಹರಾಜು ಅಥವಾ ಟೆಂಡರ್ ಯಾರ ಹೆಸರಿಗೆ ಆಗುತ್ತದೆಯೋ ಅವರು ಹರಾಜಿನ ಪೂರ್ಣ ಮೊತ್ತ ಹಾಗೂ ಪೂರ್ಣ ತೆರಿಗೆಗಳನ್ನು ಸ್ಥಳದಲ್ಲಿಯೇ ಪಾವತಿಸುವುದು. ತಪ್ಪಿದ್ದಲ್ಲಿ ಇಎಂಡಿಯನ್ನು ಮುಟ್ಟುಗೋಲು ಹಾಕಿಕೊಂಡು ಮರು ಹರಾಜು ಮಾಡಲಾಗುವುದು. ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಮೂಲ ಬಿಡ್ಡುದಾರರು ಜವಾಬ್ದಾರರಾಗಿರುತ್ತಾರೆ. (ಹಾಲಿ ಚಾಲ್ತಿಯಲ್ಲಿರುವ ತೆರಿಗೆಗಳನ್ನು ಪಾವತಿಸಬೇಕು)
7. ಹರಾಜಿನಲ್ಲಿ ಖರೀದಿಸಿದ ಮರಗಳನ್ನು ತೆಗೆಯುವಾಗ ಯಾವುದೇ ಖಾಸಗಿ ಅಥವಾ ಸರ್ಕಾರಿ ಆಸ್ತಿ ಪಾಸ್ತಿಗೆ ನಷ್ಟ ಉಂಟಾದಲ್ಲಿ ಬಿಡ್ಡುದಾರರೇ ನೇರ ಜವಾಬ್ದಾರರಾಗಿರುತ್ತಾರೆ.
8. ನೆಡುತೋಪಿನಲ್ಲಿ ವಲಯ ಅರಣ್ಯಾಧಿಕಾರಿಗಳು ಮಾರ್ಕ್ ಮಾಡಿರುವ ಮರಗಳ ನೆಡುತೋಪನ್ನು ಮಾತ್ರ ಕಡಿಯಬೇಕು.
9. ಟೆಂಡರ್-ಕಂ-ಹರಾಜು ಯಾರ ಹೆಸರಿಗೆ ಆಗುತ್ತದೆಯೋ ಅವರು ಹರಾಜು ಸ್ಥಿರೀಕರಿಸಿಕೊಂಡು ಭದ್ರತಾ ಠೇವಣಿ ನೀಡಿ ಕತ್ರಾವಣಿ ಆದೇಶ ಪಡೆದು ನಂತರ ಕತ್ರಾವಣಿ ಪ್ರಾರಂಭಿಸುವುದು.
10. ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿರವರಿಗೆ ಸೇರಿರುತ್ತವೆ.
11. ಹೆಚ್ಚಿನ ವಿವರಗಳನ್ನು ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.
12. ಆ ದಿನ ಬೆಳಿಗ್ಗೆ 12-00 ಗಂಟೆಯಿಂದ ಪ್ರಾರಂಭಿಸಿ ಅಪರಾಹ್ನ 2.00 ಗಂಟೆಯವರೆಗೆ ಟೆಂಡರ್ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ನಂತರ 3-30ಕ್ಕೆ ಹರಾಜು ಪ್ರಕ್ರಿಯೆಯನ್ನು ಪ್ರಾರಂಭಿಸಲಾಗುವುದು.
13. ಸ್ವೀಕರಿಸಲಾದ ಟೆಂಡರುಗಳನ್ನು ಅದೇ ದಿನಾಂಕದಂದು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರು ಅಥವಾ ಅವರಿಂದ ನೇಮಿಸಲ್ಪಟ್ಟವರಿಂದ ಹರಾಜು ಪ್ರಕ್ರಿಯೆ ಪೂರ್ಣಗೊಂಡ ನಂತರ ಅಪರಾಹ್ನ 5.00 ಗಂಟೆಗೆ ಹಾಜರಿರುವ ಅರಣ್ಯ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
14. ಅಂಗೀಕರಿಸಿದ ಬಿಡ್ಡುದಾರರು ಬಿಡ್ಡಿನ ಮೊತ್ತಕ್ಕೆ / ಟೆಂಡರ್ ಮೊತ್ತಕ್ಕೆ ಶೇ 8% ರಷ್ಟು ಅರಣ್ಯಾಭಿವೃದ್ಧಿ ತೆರಿಗೆ (FDT) ಯನ್ನು ಹಾಗೂ ಬಿಡ್ಡಿನ ಮೊತ್ತ, ಅರಣ್ಯಾಭಿವೃದ್ಧಿ ತೆರಿಗೆ ಇವೆರೆಡರ ಮೇಲೆ ಶೇ 12.5% ರಷ್ಟು ವ್ಯಾಟ್ ಹಾಗೂ ಈ ಮೂರರ ಮೊತ್ತದ ಮೇಲೆ ಶೇ 2.5% ರಷ್ಟು ಆದಾಯ ತೆರಿಗೆ, ಆದಾಯ ತೆರಿಗೆ ಮೇಲೆ ಶೇ 10% ರಷ್ಟು ಸರ್‌ಚಾರ್ಜ್ ಹಾಗೂ ಇವೆರಡರ ಮೇಲೆ ಎಜುಕೇಷನ್ ಸೆಸ್ ಶೇ 3% ರಷ್ಟು ಪೂರ್ಣ ತೆರಿಗೆಯನ್ನು ಪಾವತಿಸಬೇಕು.
15. ಬಿಡ್ಡುದಾರರು ಹರಾಜಿನಲ್ಲಿ ಭಾಗವಹಿಸುವುದಕ್ಕಿಂತ ಮುಂಚೆ ಸದರಿ ನೆಡುತೋಪುಗಳನ್ನು ಸ್ಥಳದಲ್ಲಿ ವೀಕ್ಷಿಸಿ ಭಾಗವಹಿಸತಕ್ಕದ್ದು.
16. ನೆಡುತೋಪಿನಲ್ಲಿರುವ ಮರಗಳ ಸಂಖ್ಯೆ ಸ್ಯಾಂಪಲ್ ಪ್ಲಾಟ್ ರಚಿಸಿರುವ ಮರಗಳ ಗಣತಿಯ ಅಂದಾಜಿನಂತಿರುತ್ತದೆ.
17. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಆಯಾ ತಾಲ್ಲೂಕಿನ ಎಲ್ಲಾ ಲಾಟುಗಳಿಗೆ ರೂ. 50000/- (ಐವತ್ತು ಸಾವಿರ) ಡಿ.ಡಿ. ಯನ್ನು ಮಾತ್ರ ಸ್ಥಳೀಯ ರಾಷ್ಟ್ರೀಕೃತ ಬ್ಯಾಂಕಿನಿಂದ ಖರೀದಿಸಿ ಸಲ್ಲಿಸುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಮಾಜಿಕ ಅರಣ್ಯ ವಿಭಾಗ, ತುಮಕೂರು.

ಪಿ.ಆರ್. 630

**WATER RESOURCES DEPARTMENT**

**Office of the Executive Engineer, No.5, Bhadra canal division, Davangere.**

**CORRIGENDUM**

**Ref: This office Tender Notification No. EE/BCD-5/DVG/JE1/Tender Notification/2007-08/311-18 dt: 24.05.07**

**TWO COVER BID SYSTEM**

**(MANUAL CUM ELECTRONIC TENDERING SYSTEM)**

Sealed item rate tenders, under two cover bid system consisting of technical and financial bid in the prescribed from for the work mentioned below through manual (conventional) and electronic (e-tendering) tendering system by the undersigned on behalf of Governor of Karnataka from the class I contractors registered in KPWD, with experience in irrigation works are eligible to participate in the tender.

The tenders are invited through manual tender and e-tendering in order to enhance the transparency in tendering process. The blank tender document can be obtained through web site www.waterresources.kar.nic.in and by linking to e-tender (i.e. once you are in the above web site, click on

e-tender which will link to www.tenderwizard.com/wrdo where electronic tendering system is provided) and can be submitted through electronic tender box available therein OR in case of manual tendering the blank tender documents can be purchased and complete documents may be submitted in the Office of the Executive Engineer, No.5 Bhadra Canal Division, Davanagere.

**I. Name of work and Details:-**

| Sl. No. | Name of work | Approximate amount put to tender (Rs. in Lakhs) | EMD (Rs. in Lakhs) | Cost Tender documents taxes extra in Rs. (Non refundable) | Stipulated period for completion of work (excluding monsoon) | Category of Contractors eligible |
|---|---|---|---|---|---|---|
| 1 | Augumentation of water to Bheemasandra Tank in Chitradurga Taluk By Construction of Feeder Canal from Annehalu | 369.56 | 3.70 | 25000/- | 12 months | Class I |

II. **SCHEDULE OF TENDER PROCESS FOR BOTH MANUAL AND E-TENDERING IS AS FOLLOWS:**

| | | | |
|---|---|---|---|
| 1. | Last date for Receiving the application for blank tender document | : | 27.10.07 up to 5.30 pm |
| 2. | Submission of DD for blank tender Document | : | 31.10.07 up to 5.30 pm |
| 3. | Date of issue of blank tender documents | : | 09.11.07 up to 5.30 pm |
| 4. | Date of submission of completed tender Bid documents- (Both Technical and financial bid) | : | 13.11.07 up to 4.00 pm |
| 5. | Date of opening of Technical bid | : | 13.11.07 up to 5.00 pm (If convenient otherwise next day) |
| 4. | Date of opening of financial bid | : | 28.11.07 up to 11.00 am |

III

1) The intended bidder while submitting the application for blank tender document shall clearly mention in their application whether they want to submit their completed tender by manual or through e-tender.
2) The cost of a tender booklet per column No.5 (taxes extra) which is not refundable and shall be in the form of Demand Draft (D.D) drawn in favour of Executive Engineer, No.5 Bhadra Canal Division, Davangere payable @ state Bank of Mysore, Davangere and it should be submitted along with the application, in case of e-tendering Demand Draft shall be scanned and original Demand Draft shall be submitted to the undersigned on or Before 31.10.07 up to 5.30 pm.
3) EMD should be in the form of DD/FDR/Pay Orders/ Bankers cheque/ scheduled Bank drawn in the favour of Executive Engineer, No.5 Bhadra Canal Division, Davangere payable @ State Bank of Mysore, Davangere Branch, And NSC duly pledged in the name of undersigned. Tenders received without EMD shall be rejected.
4) The validity of EMD shall be for a period of minimum 180 days from the date of opening of Technical bid.
5) Two cover bid system of tendering consisting of technical bid a financial bid. Bids will be received in two parts in two different sealed covers marked as technical bid (cover-1) and financial bid (cover-2) these two covers duly superscripting the name of work and shall be addressed to the undersigned with name and full postal address of the bidder. The EMD should be furnished in the technical bid (cover-1) only.
6) Financial bid of those bidders who are found qualified in the technical bid will be opened.
7) Technical bid shall contain the following Eligibility criteria, documents and other records duly attested by the officer not below the rank of district level officer . All originals certificates shall be produced at the time of opening of technical bid.

a) Certificate of registration.

b) Latest income and sale tax clearance certificates.

c) Work done certificate for having completed the similar work value not less than 50% of the amount put to tender in any of the last five year. The contractor should furnish documents to establish the ability for deploying the following machineries and equipments

| | | |
|---|---|---|
| 1) | Excavator of not less than 0.9 cum capacity | 1 No.s |
| 2) | Tippers of not less than 4 cum capacity | 2 No.s |
| 3) | Concrete mixure of not less than 7 cft.capacity with hoppers | 2 No.s |

4) All other materials required for the construction of work such as water tanker, vibrator centering materials, frame work, etc.

5) Annual financial turnover certificates for having annual turnover not less than the amount put to tender during in any one of past five financial years.

8) In case of Electronic tendering (e-tendering)

a) EMD and Eligibility criteria documents shall be scanned and attached to be e-tendering documents. All original documents shall be submitted in person to the executive engineer, No.5 Bhadra canal division, Davangere at the time of opening technical bid.

b) The contractor should attach his/her scanned signature to the schedule-B before submitting.

c) The aspiring contractors who have not previously obtained the user ID and password for participating in e-tendering in water resources department may now obtain the same by requesting in writing to the Executive Engineer, No.5, Bhadra canal division, Davangere on or before 27.10.07 up to 5.30 pm.

**IV. GENERAL CONDITIONS:**

1) If any of the dates mentioned above happen to be general holiday, the next working day holds good.
2) Further information can be had from the office of the undersigned during office hours.
3) Conditional tenders are liable to be rejected. The officer competent to accept the tender shall have the right to reject any or all the tenders without assigning any reason whatsoever.
4) The contractor who do not submit the tender forms or in case where on the tender document is submitted without necessary E.M.D. the concerned contractor for violating the rules will be intimated and his explanation for such violation will be called for, and the same will be placed on records.
5) If the contractor persistently indulges for more than three times for defaulting his/her case shall be recommended for down grading/black listing and the contractor will be intimated about the lapses and no further tender documents shall be issued.
6) Corrigendum will be published in the website/ newspapers for all modification/corrections if any.

**ODOGANGAPPA**
Executive Engineer
No.5, Bhadra canal Division, Davangere.

P.R. 645

**ಪೊಲೀಸ್ ಕಮೀಷನ್‌ರವರ ಕಛೇರಿ, ಬೆಂಗಳೂರು ನಗರ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಸಂಗ್ರಹ-1/91/2007-08, ದಿನಾಂಕ: 6ನೇ ಅಕ್ಟೋಬರ್ 2007**

| | | | |
|---|---|---|---|
| 1. | ಸಂಗ್ರಹಣಾ ಸಂಸ್ಥೆ | - | ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು. |
| 2. | ಯೋಜನೆ | - | ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ಘಟಕಕ್ಕೆ ಅವಶ್ಯಕವಾಗಿರುವ ಸರ್ವೆಲೆನ್ಸ್ ಕ್ಯಾಮರಾ ಸಂಪರ್ಕ ಜಾಲ ವ್ಯವಸ್ಥೆಗಳನ್ನು ಟೆಂಡರ್ ವ್ಯವಸ್ಥೆಗಳನ್ನು ಟೆಂಡರ್ ಮುಖಾಂತರ ಖರೀದಿ ಮಾಡುವ ಬಗ್ಗೆ. |

ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ಘಟಕಕ್ಕೆ ಅವಶ್ಯಕವಾಗಿರುವ ಸರ್ವೆಲೆನ್ಸ್ ಕ್ಯಾಮರಾ ಸಂಪರ್ಕ ಜಾಲ ವ್ಯವಸ್ಥೆಗಳನ್ನು ಟೆಂಡರ್ ಮುಖಾಂತರ ಖರೀದಿಸಲು ಮೊಹರು ಮಾಡಿರುವ ಟೆಂಡರ್ ಆಹ್ವಾನಿಸಲಾಗಿದೆ.

ಟೆಂಡರ್ ಅರ್ಜಿಗಳನ್ನು ಹಾಗೂ ಸರ್ವೆಲೆನ್ಸ್ ಕ್ಯಾಮರಾ ಸಂಪರ್ಕ ಜಾಲ ವ್ಯವಸ್ಥೆ ನಿರ್ದಿಷ್ಟತೆ/ವಿಶಿಷ್ಟತೆಯನ್ನು ದಿ:12.10.2007 ರಿಂದ ದಿ:26.10.2007 ರವರೆಗೆ ಪೊಲೀಸ್ ಆಯುಕ್ತರ ಕಛೇರಿ, ನಂ.1, ಭಗವಾನ್ ಮಹಾವೀರ್ ಜೈನ್ ರಸ್ತೆ, ಬೆಂಗಳೂರು ರವರಿಂದ ಬೆಳಿಗ್ಗೆ 10-00 ಗಂಟೆಯಿಂದ ಮಧ್ಯಾಹ್ನ 04-00 ಗಂಟೆಯವರೆಗೆ ಕಛೇರಿ ಕೆಲಸದ ದಿನಗಳಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ.500-00 (Non-refundable) ಹಣವನ್ನು ಡಿ.ಡಿ. ಮೂಲಕ, "ಉಪ ಪೊಲೀಸ್ ಕಮೀಷನರ್ (ಆಡಳಿತ), ಬೆಂಗಳೂರು ನಗರ" ಇವರ ಹೆಸರಿನಲ್ಲಿ ಪಾವತಿಸಿ ಅರ್ಜಿಯನ್ನು ಪಡೆಯತಕ್ಕದ್ದು. ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಉಪಕರಣದ ಮೌಲ್ಯಕ್ಕೆ ಶೇಕಡ 2 ರಷ್ಟು ಇ.ಎಂ.ಡಿ. ಮುಂಗಡ ಠೇವಣಿಯನ್ನು ಉಪ ಪೊಲೀಸ್ ಕಮೀಷನರ್ (ಆಡಳಿತ), ಬೆಂಗಳೂರು ನಗರ ರವರ ಪದನಾಮದಲ್ಲಿ ಪಡೆಯತಕ್ಕದ್ದು. ಒಂದು ಲಕೋಟೆಯಲ್ಲಿ ಇ.ಎಂ.ಡಿ. ಡಿ.ಡಿ./ಬ್ಯಾಂಕ್ ಗ್ಯಾರಂಟಿ ಹಾಗೂ ದರಪಟ್ಟಿಗಳ ದಾಖಲಾತಿಯ ವಿವರಗಳನ್ನು ಹಾಗೂ ಮತ್ತೊಂದು ಲಕೋಟೆಯಲ್ಲಿ ಮಾದರಿಯ ಬ್ರೋಚರ್ಸ್, ಕ್ಯಾಟ್‌ಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್ ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳನ್ನು ಈ ಕಛೇರಿಯ ಶ್ರೀ ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ, ಐ.ಪಿ.ಎಸ್, ಅಪರ ಪೊಲೀಸ್ ಕಮೀಷನರ್ (ಆಡಳಿತ) ನಂ.1, ಭಗವಾನ್ ಮಹಾವೀರ್ ಜೈನ್ ರಸ್ತೆ, ಬೆಂಗಳೂರು ನಗರ ರವರಿಗೆ ವಿಳಾಸಿಸಿ ದಿ:24.12.2007 ರಂದು ಮಧ್ಯಾಹ್ನ 5-00 ಗಂಟೆಯೊಳಗಾಗಿ ಸಲ್ಲಿಸತಕ್ಕದ್ದು. ಸ್ವೀಕರಿಸಿದ ಟೆಂಡರ್‌ಗಳನ್ನು ದಿ:26.12.2007 ರಂದು ಬೆಳಿಗ್ಗೆ 11-00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳನ್ನು/ಷರತ್ತುಗಳನ್ನು ಟೆಂಡರ್ ಅರ್ಜಿಯೊಂದಿಗೆ ನೀಡಲಾಗುವುದು.

**ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ**
ಅಪರ ಪೊಲೀಸ್ ಆಯುಕ್ತರು, (ಆಡಳಿತ) ಹಾಗೂ
ಪಿ.ಆರ್. 643 (ಟೆಂಡರ್ ಆಹ್ವಾನಿಸುವ ಮತ್ತು ತೆರೆಯುವ ಪ್ರಾಧಿಕಾರ)
ಬೆಂಗಳೂರು ನಗರ.

**ಉಪ ನಿರ್ದೇಶಕರ ಕಛೇರಿ, ರಾಜ್ಯ ಜಾನುವಾರು ಸಂವರ್ಧನ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-560088**

**ಹರಾಜು ಪ್ರಕಟಣೆ**

**ಸಂ: ರಾಜಾಸಂತಕೇಂ/ಉಗ್ರಾಣ/ವಾಹನ-ಹರಾಜು/2007-08, ದಿನಾಂಕ: 8ನೇ ಅಕ್ಟೋಬರ್ 2007**

**ವಿಷಯ:** ಈ ಕೇಂದ್ರದಲ್ಲಿರುವ ಅನುಪಯುಕ್ತ ವಾಹನ, ಖಾಲಿ ಗೋಣಿ ಚೀಲಗಳನ್ನು ಹಾಗೂ ಹುಣಸೆ ಫಸಲು ಮತ್ತು ತೆಂಗಿನ ಫಸಲನ್ನು (ಅಮರಾಯಿಫಸಲು) ಸಾರ್ವಜನಿಕ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಕ್ಷೇತ್ರದಲ್ಲಿ ಬೆಳೆದಿರುವ 120 ಹುಣಸೇ ಮರಗಳಲ್ಲಿ ಇರುವ ಹುಣಸೆ, 8 ತೆಂಗಿನ ಮರದ ಫಸಲನ್ನು, ಅನುಪಯುಕ್ತ ವಾಹನ ಮತ್ತು ಖಾಲಿ ಗೋಣಿ ಚೀಲಗಳನ್ನು ಬಹಿರಂಗ ಹರಾಜು ಮೂಲಕ ಸಾರ್ವಜನಿಕರಿಗೆ ವಿಲೇವಾರಿ ಮಾಡಲು ಉದ್ದೇಶಿಸಲಾಗಿದೆ. ಈ ಸಂಬಂಧ ಹುಣಸೆ, ತೆಂಗಿನ ಫಸಲಿನ ಬಹಿರಂಗ ಹರಾಜನ್ನು ದಿನಾಂಕ:13.11.2007 ರಂದು ಬೆಳಿಗ್ಗೆ 11.00 ಗಂಟೆಗೆ ನಡೆಸಲಾಗುವುದು ಹಾಗೂ ಅನುಪಯುಕ್ತ ವಾಹನ ಮತ್ತು ಖಾಲಿ ಗೋಣಿ ಚೀಲಗಳು ಎಲ್ಲಿವೆಯೋ ಅದೇ ಸ್ಥಿತಿಯಲ್ಲಿ ಹರಾಜನ್ನು ಮಧ್ಯಾಹ್ನ 3.00 ಗಂಟೆಗೆ ನಡೆಸಲಾಗುವುದು.

ಇಚ್ಛೆಯುಳ್ಳವರು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಹರಾಜಿನಲ್ಲಿ ಭಾಗವಹಿಸಬಹುದು.

**ನಿಬಂಧನೆಗಳು**

1. ಹುಣಸೆ ಹಾಗೂ ತೆಂಗಿನ ಫಸಲಿನ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ಹರಾಜಿಗೆ ಮೊದಲು ರೂ.1000-00 ಹಾಗೂ ವಾಹನ ಮತ್ತು ಖಾಲಿ ಗೋಣಿ ಚೀಲಗಳ ಹರಾಜಿನಲ್ಲಿ ಭಾಗವಹಿಸುವವರು ರೂ.5000-00 ಠೇವಣಿ ಇಡಬೇಕು.
2. ಹರಾಜನ್ನು ಕೇಂದ್ರ ಕಛೇರಿಯಿಂದ ನೇಮಿಸಲ್ಪಟ್ಟ ಅಧಿಕಾರಿಯವರು ನಡೆಸಿಕೊಡುತ್ತಾರೆ.
3. ಹರಾಜನ್ನು ಯಾವುದೇ ಸಂದರ್ಭದಲ್ಲಾಗಲೀ ನಿಲ್ಲಿಸುವ ಹಕ್ಕು ಹರಾಜು ಅಧಿಕಾರಿಯವರಿಗಿರುತ್ತದೆ.
4. ಯಶಸ್ವೀ ಹರಾಜುದಾರರು, ಹರಾಜು ಮುಗಿದಕೂಡಲೇ ಹರಾಜಿನ ಪೂರ್ತಿ ಮೊತ್ತ ಮತ್ತು ತೆರಿಗೆಯನ್ನು (ವ್ಯಾಟ್) ಕಛೇರಿಯಲ್ಲಿ ಕಟ್ಟಿ ಸ್ವೀಕೃತಿಪಡೆಯತಕ್ಕದ್ದು. ತಪ್ಪಿದಲ್ಲಿ ಅವರ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಇದರಿಂದಾಗಬಹುದಾದ ನಷ್ಟವನ್ನು ಅವರಿಂದ ವಸೂಲು ಮಾಡಲಾಗುವುದು. ಸರ್ಕಾರಕ್ಕೆ ಆದ ಯಾವುದೇ ರೀತಿಯ ಲಾಭಕ್ಕೆ ಅವರಿಗೆ ಹಕ್ಕು ಇರುವುದಿಲ್ಲ.
5. ಹರಾಜಾದಾಗಿನಿಂದ ಫಸಲನ್ನು ಕಟಾವು ಮಾಡುವರೆವಿಗೆ ಕಾಯ್ದುಕೊಳ್ಳುವ ಹೊಣೆ ಯಶಸ್ವೀ ಬಿಡ್‌ದಾರರದೇ ಆಗಿರುತ್ತದೆ.
6. ಫಸಲನ್ನು ಮತ್ತು ಮರಗಳನ್ನು ವೀಕ್ಷಿಸಲು ಇಚ್ಛೆಯುಳ್ಳವರು ರಜಾದಿನಗಳನ್ನು ಹೊರತುಪಡಿಸಿ, ಕಛೇರಿ ವೇಳೆಯಲ್ಲಿ ಅಧಿಕಾರಿಯವರ ಅನುಮತಿ ಪಡೆದು ವೀಕ್ಷಿಸಬಹುದು.
7. ಹರಾಜಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ಕಛೇರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ನೌಕರರು ಭಾಗವಹಿಸುವಂತಿಲ್ಲ.
8. ಸರ್ಕಾರದ ಸ್ವತ್ತಿಗೆ ಯಾವುದೇ ರೀತಿಯ ನಷ್ಟ ಉಂಟಾದಲ್ಲಿ, ಅಂತಹ ನಷ್ಟವನ್ನು ಯಶಸ್ವಿ ಬಿಡ್ಡುದಾರರೇ ಭರಿಸಿ ಕೊಡಬೇಕಾಗುತ್ತದೆ.

ಪಿ.ಆರ್. 644 ಉಪ ನಿರ್ದೇಶಕರು (ತ).

4. ಈ ಸದರಿ ಕಾಮಗಾರಿಗಳು ಕಾಲಬದ್ದ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್ ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.
5. ಪ್ರತಿ ಟೆಂಡರ್ ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸ ಬೇಕಾಗುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಬವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ವಿಭಾಗ, ರಾಮನಗರರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
9. ಯಾವುದೇ ಕಾರಣ ನೀಡದೆ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ರವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಸಹಿ ಮಾಡತಕ್ಕದ್ದು. ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರು ಹೊಂದಿರುತ್ತಾರೆ.
11. ಈ ಮೇಲಿನ ಕಾಮಗಾರಿಗಳ ಅನುಷ್ಟಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾ ಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಳಿಗೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂ.ಬಿ/ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್ ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆಧಾಯ ತೆರಿಗೆ, ಮಾರಾಟ ತೆರಿಗೆ, ಸರ್ ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳನ್ನು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜರುಗಿಸಲಾಗುವುದು.
14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಚೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಢಿಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್ ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತಃ ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರಿಗೆ ಯಾವುದೇ ಕಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ಪಟ್ಟಿಗಳ ಅಂದಾಜು ದರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.
18. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು.

ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವಾ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ಧರಾಗಿರಬೇಕಾಗಿರುತ್ತದೆ.

19. ವಲಯ ಅರಣ್ಯಾಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿಗಳ ನಿರ್ದೇಶನದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗಧಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು. ಅತಿ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ.5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯ ಅಧಿಕಾರಿ ಮತ್ತು ಸಹಾಯಕ ಅರಣ್ಯ ಅಧಿಕಾರಿರವರು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

20. ಟೆಂಡರ್‌ನ್ನು ಕಂಪನಿಯ ವತಿಯಿಂದ/ಸಂಘ ಸಂಸ್ಥೆಗಳು ಕೊಡುವ ಪಕ್ಷದಲ್ಲಿ
    ಅ) ಕಂಪನಿಯ/ಸಂಘ ಸಂಸ್ಥೆಗಳ ನೋಂದಾಯಿತ ಸಂಸ್ಥೆಗಳಾಗಿರಬೇಕು.
    ಆ) ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.

21. ಅರಣ್ಯ ಕೂಲಿಕಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಛಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು ಹಾಗೂ ಸಂಘಗಳ ನೋಂದಣಿ ನಿಯಮದಂತೆ ಸಂಘಗಳೂ ಕಡ್ಡಾಯವಾಗಿ ನೊಂದಣಿಯಾಗಿರಬೇಕು. ಇಲ್ಲವಾದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು.

22. ಯಶಸ್ವಿ ಟೆಂಡರ್ ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರನ್ನು ಹಿಂತೆಗೆದುಕೊಂಡಲ್ಲಿ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಟೆಂಡರ್ ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.

23. ಯಶಸ್ವಿ ಬಿಡ್ದುದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇ.5 ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ನೆಡುತೋಪು ನಿರ್ಮಾಣ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ದೃಢೀಕರಣ ಪತ್ರ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.

24. ಕೆಲಸ ಪೂರ್ಣಗೊಂಡ ದಿನಾಂಕದಂದು 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುತ್ತದೆ. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು. ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.

25. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ/ಇನ್ನಿತರೆ ಹಾನಿಗಳು ಸಂಭವಿಸಿದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.

26. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.

27. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೊಂದಣಿಯನ್ನು ಮಾಡಲಾಗುವುದಿಲ್ಲ.

28. ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ಇವರು ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ದರಾಗಿರಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ರಾಮನಗರ ವಿಭಾಗ,
ರಾಮನಗರ

ಪಿ.ಆರ್. 655

**ಕರ್ನಾಟಕ ಲೋಕ ಸೇವಾ ಆಯೋಗ**

**ಲೋಕ ಸೇವಾ ಆಯೋಗದ ಕಛೇರಿ ಉದ್ಯೋಗ ಸೌಧ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಇ(3) 144/2007-08/ಪಿಎಸ್‌ಸಿ, ದಿನಾಂಕ: 28ನೇ ಸೆಪ್ಟೆಂಬರ್ 2007**

**ಉಲ್ಲೇಖ:** 1 ಅಧಿಸೂಚನೆ ಸಂಖ್ಯೆ: ಇ(3) 406/2005-06/ಪಿಎಸ್‌ಸಿ, ದಿನಾಂಕ: 12.12.2005.

2 ಅಧಿಸೂಚನೆ ಸಂಖ್ಯೆ: ಇ(3) 456/2006-07/ಪಿಎಸ್‌ಸಿ, ದಿನಾಂಕ: 23.02.2007.

3 ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 26 ಸೆಹಿಮ 2002, ದಿನಾಂಕ: 11.04.2003.

4 ಕರ್ನಾಟಕ ಲೋಕಾಯುಕ್ತದ ಪತ್ರ ಸಂಖ್ಯೆ:ಕ.ಲೋ./ಸಿಬ್ಬಂದಿ(1) 48/2005-06 ದಿನಾಂಕ: 06.06.2007 (ಸ್ವೀಕೃತಿ ದಿನಾಂಕ:07.06.2007)

5 ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕಾರವಾರದ-ಪತ್ರ ಸಂಖ್ಯೆ:ಆಡಳಿತ-1/3536 2007, ದಿನಾಂಕ: 11.07.2007 (ಸ್ವೀಕೃತಿ ದಿನಾಂಕ: 11.07.2007)

6 ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯದ-ಪತ್ರ ಸಂಖ್ಯೆ:ಮಿಸ್ ಟು ನಂ: 2609 2007, ದಿನಾಂಕ: 25.07.2007 (ಸ್ವೀಕೃತಿ ದಿನಾಂಕ: 28.07.2007)

7 ಅಧಿಸೂಚನೆ ಸಂಖ್ಯೆ:ಇ(3) 137/2007-08/ಪಿಎಸ್‌ಸಿ, ದಿನಾಂಕ: 12.09.2007

ಆಯೋಗದ ಉಲ್ಲೇಖ(1)ರ ಅಧಿಸೂಚನೆಯಲ್ಲಿ ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ, ದಿನಾಂಕ: 25.06.2006ರಂದು ಸ್ಪರ್ಧಾತ್ಮಕ ಪರೀಕ್ಷೆ ನಡೆಸಲಾಗಿತ್ತು. ಈ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪಡೆದ ಅಂಕಗಳ ಅರ್ಹತಾನುಸಾರ ಹಾಗೂ ಚಾಲ್ತಿಯಲ್ಲಿದ್ದ ಮೀಸಲಾತಿಗನುಸಾರವಾಗಿ ಕರ್ನಾಟಕ ನಾಗರೀಕ ಸೇವಾ (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978ರ ನಿಯಮ 5(1)ರಂತೆ ಉಲ್ಲೇಖ (2) ಅಧಿಸೂಚನೆಯಲ್ಲಿ 983 ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳಿಗೆ ಮುಖ್ಯ ಪಟ್ಟಿಯನ್ನು ಪ್ರಕಟಿಸಿ, ಆಯ್ಕೆಯಾದ ಅಭ್ಯರ್ಥಿಗಳನ್ನು ಅವರುಗಳು ನೀಡಿದ ಇಲಾಖಾ ಆದ್ಯತಾನುಸಾರ ವಿವಿಧ ಇಲಾಖೆಗಳಿಗೆ ಹಂಚಿಕೆ ಮಾಡಲಾಗಿತ್ತು.

ಉಲ್ಲೇಖ (3)ರ ಸರ್ಕಾರಿ ಆದೇಶದಂತೆ, ಮುಖ್ಯ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗದ ಕಾರಣ, ಭರ್ತಿಯಾಗದೆ ಉಳಿದ ರಿಕ್ತ ಸ್ಥಾನಗಳನ್ನು ಅದೇ ವರ್ಗಕ್ಕೆ ಸೇರಿದ ಅಭ್ಯರ್ಥಿಗಳಿಂದ ಹೆಚ್ಚುವರಿ ಪಟ್ಟಿಯ ಮುಖಾಂತರ ಭರ್ತಿ ಮಾಡಲು ಉಲ್ಲೇಖ (4) ರಿಂದ (6) ರಲ್ಲಿ ತೋರಿಸಿರುವ ಇಲಾಖೆಗಳಿಂದ ಬೇಡಿಕೆಗಳನ್ನು ಸ್ವೀಕರಿಸಲಾಗಿದೆ. ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಅಂಕಗಳ ಅರ್ಹತಾನುಸಾರ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿಗನುಸಾರವಾಗಿ ಕರ್ನಾಟಕ ನಾಗರೀಕ ಸೇವಾ (ಲಿಪಿಕ ಹುದ್ದೆಗಳ ನೇಮಕಾತಿ) ನಿಯಮಗಳು 1978ರ ನಿಯಮ 5(2) ರಂತೆ ತಾತ್ಕಾಲಿಕ ಹೆಚ್ಚುವರಿ ಪಟ್ಟಿ ತಯಾರಿಸಿ, ಮುಖ್ಯ ಪಟ್ಟಿಯಲ್ಲಿ ಇಲಾಖೆಗಳಿಗೆ ಹಂಚಿಕೆ ಮಾಡಿದ ಹುದ್ದೆಗಳ ಶೇಕಡ 10ಕ್ಕೆ ಮೀರದಂತೆ, ನಿಯಮ 10 ರಂತೆ ಇಲಾಖೆಗಳ ಕಾಲಾನುಕ್ರಮ ಬೇಡಿಕೆಯ ಅನುಸಾರವಾಗಿ ಅಭ್ಯರ್ಥಿಗಳನ್ನು ಇಲಾಖೆಗಳಿಗೆ ಹಂಚಿಕೆ ಮಾಡಿರುವ ವಿವರವನ್ನು ಉಲ್ಲೇಖ (7)ರ ಅಧಿಸೂಚನೆಯಲ್ಲಿ ಪ್ರಕಟಿಸಿ 15 ದಿನಗಳೊಳಗಾಗಿ ಸಂಬಂಧಪಟ್ಟವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಇದಕ್ಕೆ ಸಂಬಂಧಪಟ್ಟಂತೆ ಯಾವುದೇ ಆಕ್ಷೇಪಣೆಗಳು ಸ್ವೀಕೃತಗೊಂಡಿಲ್ಲವಾದ್ದರಿಂದ, ಆಯೋಗವು ಈ ಮೂರು ಇಲಾಖೆಗಳಿಗೆ ಸಂಬಂಧಿಸಿದಂತೆ ಅಂತಿಮ ಹೆಚ್ಚುವರಿ ಪಟ್ಟಿಯನ್ನು ಈ ಮೂಲಕ ಅಭ್ಯರ್ಥಿಗಳ ಮಾಹಿತಿಗಾಗಿ ಪ್ರಕಟಿಸಿದೆ.

ಹುದ್ದೆಯ ಪದನಾಮ : ದ್ವಿತೀಯ ದರ್ಜೆ ಸಹಾಯಕ

ನೇಮಕಾತಿ ಪ್ರಾಧಿಕಾರ : ರಿಜಿಸ್ಟ್ರಾರ್
ಕರ್ನಾಟಕ ಲೋಕಾಯುಕ್ತ ಬೆಂಗಳೂರು

| ಕ್ರ. ಸಂ. | ನೋಂದಣಿ ಸಂಖ್ಯೆ | ಹೆಸರು ಮತ್ತು ವಿಳಾಸ | ಪಡೆದ ಅಂಕ | ಜನ್ಮ ದಿನಾಂಕ | ಆಯ್ಕೆ ಹೊಂದಿರುವ ವರ್ಗ |
|---|---|---|---|---|---|
| 1 | 203824 | ಖೂಬರಾಂ ಚೌಧರಿ<br>C/o ಎಸ್.ಪಿ. ಮದ್ರಾಸಿ # 8483 ಸೆಟಲ್‌ಮೆಂಟ್<br>ಗಂಗಾಧರ್ ನಗರ ಹುಬ್ಬಳ್ಳಿ - 580 020 | 222 | 21.03.1982 | ಸಾಮಾನ್ಯ ಅರ್ಹತೆ / ಇತರೆ |
| 2 | 437518 | ಪ್ರಸನ್ನ ಕುಮಾರ ಎಂ.ಎಸ್. ಬಿನ್ ಎಂ.ವಿ. ಸತ್ಯನಾರಾಯಣ ಜಿ.ಮೇಲನಹಳ್ಳಿ, ಜಿ.ಘಟ್ಟ (ಅಂಚೆ), ಎನ್.ವಿ.ಕೆರೆ (ಮಾರ್ಗ) ತಿಪಟೂರ್ ತಾಲ್ಲೂಕು ತುಮಕೂರು - 572224 | 213 | 28.05.1979 | ಸಾಮಾನ್ಯ ಅರ್ಹತೆ / ಗ್ರಾಮೀಣ |

ಹುದ್ದೆಯ ಪದನಾಮ : ದ್ವಿತೀಯ ದರ್ಜೆ ಸಹಾಯಕ

ನೇಮಕಾತಿ ಪ್ರಾಧಿಕಾರ : ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ
ಉತ್ತರ ಕನ್ನಡ, ಕಾರವಾರ

| ಕ್ರ. ಸಂ. | ನೋಂದಣಿ ಸಂಖ್ಯೆ | ಹೆಸರು ಮತ್ತು ವಿಳಾಸ | ಪಡೆದ ಅಂಕ | ಜನ್ಮ ದಿನಾಂಕ | ಆಯ್ಕೆ ಹೊಂದಿರುವ ವರ್ಗ |
|---|---|---|---|---|---|
| 1 | 191094 | ವೀರಭದ್ರಯ್ಯ ಅಲಿಯಾಸ್ ರುದ್ರಯ್ಯ ಬಿನ್ ಪಿ.ಪಿ. ಮುಡೇನೂರ್ ಮಠ ವಿಜಯ ಮಾಹಂತೇಶ್ ನಗರ ರಾಮದುರ್ಗ ಅಂಚೆ ಬೆಳಗಾವಿ - 591123 | 220.5 | 17.03.1974 | ಸಾಮಾನ್ಯ ಅರ್ಹತೆ / ಇತರೆ |
| 2 | 044909 | ಬಸಯ್ಯ ನಂದಯ್ಯ ಅಂಗಡಿ # 20/1 ಅಶ್ವಥ ನಗರ ಕೆನರಾ ಬ್ಯಾಂಕ್ ಹತ್ತಿರ, ಬೆಂಗಳೂರು - 560094 | 177 | 22.06.1962 | ಸಾಮಾನ್ಯ ಅರ್ಹತೆ / ಮಾಜಿ ಸೈನಿಕ |

ಹುದ್ದೆಯ ಪದನಾಮ : ದ್ವಿತೀಯ ದರ್ಜೆ ಸಹಾಯಕ

ನೇಮಕಾತಿ ಪ್ರಾಧಿಕಾರ : ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಮಂಡ್ಯ

| ಕ್ರ. ಸಂ. | ನೋಂದಣಿ ಸಂಖ್ಯೆ | ಹೆಸರು ಮತ್ತು ವಿಳಾಸ | ಪಡೆದ ಅಂಕ | ಜನ್ಮ ದಿನಾಂಕ | ಆಯ್ಕೆ ಹೊಂದಿರುವ ವರ್ಗ |
|---|---|---|---|---|---|
| 1 | 351831 | ಮಲ್ಲೇಶ ಕೆ.ವಿ. ಬಿನ್ ಕಲ್ಲುವೀರಪ್ಪ ಮಹಾಲಿಂಗನ ಕಟ್ಟೆ, ಉದನೂರ್ (ಅಂಚೆ) ಕೊಳ್ಳೆಗಾಲ ತಾಲ್ಲೂಕು ಚಾಮರಾಜನಗರ ಜಿಲ್ಲೆ | 213 | 06.06.1980 | ಸಾಮಾನ್ಯ ಅರ್ಹತೆ / ಗ್ರಾಮೀಣ |
| 2 | 188592 | ಸದಾನಂದ ಬಡಿಗೇರ್ ಜೇಡರ್ ಪೇಟ್ ಓಣಿ ಮೊರಬ್ (ಅಂಚೆ) ನವಲಗುಂದ ತಾಲ್ಲೂಕು, ಧಾರವಾಡ - 580112 | 207 | 06.07.1982 | ಪ್ರವರ್ಗ-2ಎ / ಗ್ರಾಮೀಣ |
| 3 | 324227 | ಕಿರಣ್ ಜಿ.ಸಿ. ಬಿನ್ ಚಿಕ್ಕಕಲ್ಲಯ್ಯ # 2934, 7ನೇ ಕ್ರಾಸ್, ಗಾಂಧಿನಗರ, ಮಂಡ್ಯ - 571401 | 205.50 | 07.06.1987 | ಪರಿಶಿಷ್ಟ ಜಾತಿ / ಇತರೆ |
| 4 | 203511 | ತೋಟಗಿ ಮಲ್ಲಿಕಾರ್ಜುನ ಕೆಂಚಪ್ಪ # 4ಎ, 3ನೇ ಕ್ರಾಸ್, ಗುರುದೇವ ನಗರ, ಹುಬ್ಬಳ್ಳಿ - 580032 | 177 | 14.08.1963 | ಸಾಮಾನ್ಯ ಅರ್ಹತೆ / ಮಾಜಿ ಸೈನಿಕ |

**ಟಿಪ್ಪಣಿ: ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಮುಖ್ಯ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳು ಜೇಷ್ಠತೆಯಲ್ಲಿ ಹಿರಿಯರಾಗುತ್ತಾರೆ. ಹೆಚ್ಚುವರಿ ಪಟ್ಟಿಯಲ್ಲಿ ನೇಮಕವಾದ ಅಭ್ಯರ್ಥಿಗಳು ಜೇಷ್ಠತೆಯಲ್ಲಿ ಕಿರಿಯರಾಗುತ್ತಾರೆ.**

**ಡಾ|| ಹೆಚ್.ವಿ. ಪಾರ್ಶ್ವನಾಥ್**

ಪಿ.ಆರ್. 628

ಕಾರ್ಯದರ್ಶಿ

ಕರ್ನಾಟಕ ಲೋಕ ಸೇವಾ ಆಯೋಗ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ ಇವರ ಕಾರ್ಯಾಲಯ

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂ. ಬಿ1/ಬಿಯುಡಿ-ಟೆಂಡರ್/ಸಿಆರ್-70/07-08, ದಿನಾಂಕ: 5ನೇ ಅಕ್ಟೋಬರ್ 2007**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2007-08ನೇ ಸಾಲಿನಲ್ಲಿ ದಾವಣಗೆರೆ ವಿಭಾಗದಲ್ಲಿ ಈ ಕೆಳಗೆ ಕಾಣಿಸಿದ ಷೆಡ್ಯೂಲ್‌ನಲ್ಲಿ ನಮೂದಿಸಿದಂತೆ ಗುಂಡಿಗಳನ್ನು ತೆಗೆಯಲು, ಜಾನುವಾರು ನಿರೋಧಕ ಕಂದಕವನ್ನು ತೆಗೆಯಲು ಹಾಗೂ ರಿಪ್ಪಿಂಗ್ ಕಾಮಗಾರಿಗಳನ್ನು ನಿರ್ವಹಿಸಲು 2007-08ನೇ ಸಾಲಿಗೆ ಈ ವಿಭಾಗದಲ್ಲಿ ನೊಂದಾಯಿತರಾದ ಅರಣ್ಯ ಗುತ್ತಿಗೆದಾರರಿಂದ ನಿಗದಿತ ನಮೂನೆಯಲ್ಲಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಇಚ್ಛೆಯುಳ್ಳವರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟಂತೆ ಟೆಂಡರ್‌ನಲ್ಲಿ ಭಾಗವಹಿಸಿ ತಮ್ಮ ದರವನ್ನು ಸೂಚಿಸಲು ಕೋರಲಾಗಿದೆ.

**ಷೆಡ್ಯೂಲ್-1**

| | | | |
|---|---|---|---|
| 1 | ಟೆಂಡರ್ ಜರುಗುವ ಸ್ಥಳ | : | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಲೋಕಿಕೆರೆ ರಸ್ತೆ, ಟಿ.ವಿ.ಸ್ಟೇಷನ್ ಹತ್ತಿರ, ದಾವಣಗೆರೆ |
| 2 | ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ | : | ದಿನಾಂಕ 15.11.2007 ರಂದು ಬೆಳಿಗ್ಗೆ 10-00 ಗಂಟೆಯಿಂದ ಮಧ್ಯಾಹ್ನ 1-00 ಗಂಟೆಯವರೆಗೆ |
| 3 | ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ ಮತ್ತು ಸಮಯ | : | ದಿನಾಂಕ 15.11.2007 ರಂದು ಮಧ್ಯಾಹ್ನ 4.30 ಗಂಟೆಯವರೆಗೆ |

| | | | |
|---|---|---|---|
| 4 | ಟೆಂಡರ್‌ಗಳನ್ನು ತೆರೆಯುವ ಸಮಯ | : | ದಿನಾಂಕ 15.11.2007 ರಂದು ಮಧ್ಯಾಹ್ನ 5.00 ಗಂಟೆಗೆ |
| 5 | ಟೆಂಡರ್ ಫಾರಂ ದರ | : | ರೂ. 220/- |
| 6 | ಅರಣ್ಯ ಗುತ್ತಿಗೆದಾರನಾಗಿ ನೊಂದಣಿ ಮಾಡಿಸಲು ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ | : | 14.11.07 |

**ಷೆಡ್ಯೂಲ್ - 2**

**ಯುನಿಟ್ - 1**

(ಪ್ರಮಾಣ ಸಂಖ್ಯೆಗಳಲ್ಲಿ) (ಮೊತ್ತ ರೂ. ಗಳಲ್ಲಿ)

| ಕ್ರ. ಸಂ. | ಯೋಜನೆ | ವಲಯ | ಕಾಮಗಾರಿ ವಿವರ | ಅಂದಾಜು ಪ್ರಮಾಣ | ಅಂದಾಜು ಮೊತ್ತ | ಇ.ಎಂ.ಡಿ. |
|---|---|---|---|---|---|---|
| 1 | ಕೆ.ಎಸ್.ಎಫ್.ಎಂ. ಬಿ.ಸಿ., ಪರಿಹಾರತ್ಮಕ ಹಸರೀಕರಣ ಡಿ.ಡಿ.ಎಫ್. | ದಾವಣಗೆರೆ | ಮಾನವ ನಿರ್ಮಿತ 0.60 x 0.60 x 0.60 ಸೆ.ಮೀ. ಅಳತೆಯ ಗುಂಡಿಗಳನ್ನು ತೆಗೆಯುವುದು. | 65500 | 656487 | 13500 |
| 2 | | ಹರಪನಹಳ್ಳಿ | | 102500 | 1028023 | 20600 |
| 3 | | ಜಗಳೂರು | | 64000 | 640138 | 12800 |

**ಯುನಿಟ್ - 2**

(ಪ್ರಮಾಣ ಸಂಖ್ಯೆಗಳಲ್ಲಿ) (ಮೊತ್ತ ರೂ. ಗಳಲ್ಲಿ)

| ಕ್ರ. ಸಂ. | ಯೋಜನೆ | ವಲಯ | ಕಾಮಗಾರಿ ವಿವರ | ಅಂದಾಜು ಪ್ರಮಾಣ | ಅಂದಾಜು ಮೊತ್ತ | ಇ.ಎಂ.ಡಿ. |
|---|---|---|---|---|---|---|
| 1 | ಕೆ.ಎಸ್.ಎಫ್.ಎಂ.ಬಿ.ಸಿ., | ಹರಪನಹಳ್ಳಿ | ಮಾನವ ನಿರ್ಮಿತ 0.75 x 0.75 x 0.75 ಸೆ.ಮೀ. ಅಳತೆಯ ಗುಂಡಿಗಳನ್ನು ತೆಗೆಯುವುದು. | 20000 | 393840 | 7900 |
| 2 | | ಜಗಳೂರು | | 15000 | 295380 | 6000 |

**ಯುನಿಟ್ - 3**

(ಪ್ರಮಾಣ ರನ್ನಿಂಗ್ ಮೀಟರ್‌ಗಳಲ್ಲಿ) (ಮೊತ್ತ ರೂ. ಗಳಲ್ಲಿ)

| ಕ್ರ. ಸಂ. | ಯೋಜನೆ | ವಲಯ | ಕಾಮಗಾರಿ ವಿವರ | ಅಂದಾಜು ಪ್ರಮಾಣ | ಅಂದಾಜು ಮೊತ್ತ | ಇ.ಎಂ.ಡಿ. |
|---|---|---|---|---|---|---|
| 1 | ಕೆ.ಎಸ್.ಎಫ್.ಎಂ.ಬಿ.ಸಿ., ಡಿ.ಡಿ.ಎಫ್. ಪರಿಹಾರತ್ಮಕ ಅರಣ್ಯೀಕರಣ | ದಾವಣಗೆರೆ | ಡಿ-80 ಯಂತ್ರದಿಂದ ರಿಪ್ಪಿಂಗ್ ಮಾಡುವುದು | 118250 | 348461 | 7000 |
| 2 | | ಹರಪನಹಳ್ಳಿ | | 294550 | 872969 | 17500 |
| 3 | | ಜಗಳೂರು | | 268750 | 791957 | 15900 |

**ಯುನಿಟ್ - 4**

(ಪ್ರಮಾಣ ರನ್ನಿಂಗ್ ಮೀಟರ್‌ಗಳಲ್ಲಿ) (ಮೊತ್ತ ರೂ. ಗಳಲ್ಲಿ)

| ಕ್ರ. ಸಂ. | ಯೋಜನೆ | ವಲಯ | ಕಾಮಗಾರಿ ವಿವರ | ಅಂದಾಜು ಪ್ರಮಾಣ | ಅಂದಾಜು ಮೊತ್ತ | ಇ.ಎಂ.ಡಿ. |
|---|---|---|---|---|---|---|
| 1 | ಕೆ.ಎಸ್.ಎಫ್.ಎಂ.ಬಿ.ಸಿ., ಡಿ.ಡಿ.ಎಫ್. ಪರಿಹಾರತ್ಮಕ ಅರಣ್ಯೀಕರಣ | ದಾವಣಗೆರೆ | $\frac{(1.5+1)}{2}$ x 1 ಅಳತೆಯ ಜಾನುವಾರು ನಿರೋಧಕ ಗುಂಡಿ ತೆಗೆಯುವುದು (ಮಾನವ ನಿರ್ಮಿತ) | 18450 | 860692 | 17300 |
| 2 | | ಹರಪನಹಳ್ಳಿ | | 30725 | 1433321 | 28700 |
| 3 | | ಜಗಳೂರು | | 36850 | 1719052 | 34400 |

**ನಿಬಂಧನೆಗಳು:**

1. ಟೆಂಡರ್‌ನಲ್ಲಿ ಭಾಗವಹಿಸುವ ಗುತ್ತಿಗೆದಾರರು 2007-08ನೇ ಸಾಲಿಗೆ ಈ ವಿಭಾಗದಲ್ಲಿ ನೊಂದಾಯಿತ ಗುತ್ತಿಗೆದಾರರಾಗಿರತಕ್ಕದ್ದು.
2. ಟೆಂಡರ್ ದಿನಾಂಕ: 15.11.2007 ರಂದು ಬೆಳಿಗ್ಗೆ 10.00 ಗಂಟೆಯಿಂದ ಮಧ್ಯಾಹ್ನ 1.00 ಗಂಟೆಯವರೆಗೆ ಟೆಂಡರ್ ನಮೂನೆಯನ್ನು ಶುಲ್ಕ ರೂ. 220/- ಗಳನ್ನು ಪಾವತಿಸಿ ಪಡೆಯತಕ್ಕದ್ದು.
3. ಟೆಂಡರ್ ನಮೂನೆಯನ್ನು ನಿಗಧಿತ ಇ.ಎಂ.ಡಿ. ಯೊಂದಿಗೆ ಪೂರ್ಣ ಪ್ರಮಾಣದಲ್ಲಿ ಭರ್ತಿ ಮಾಡಿ ಈ ಕಛೇರಿಯಲ್ಲಿನ ಟೆಂಡರ್ ಪೆಟ್ಟಿಗೆಯಲ್ಲಿ ಟೆಂಡರ್ ದಿವಸದಂದೇ 4.30 ರೊಳಗಾಗಿ ಹಾಕತಕ್ಕದ್ದು.
4. ದರಗಳನ್ನು ಇಲಾಖಾ ಎಸ್.ಎಸ್.ಆರ್. ದರಗಳಿಗಿಂತ ಶೇಕಡವಾರು ಇಂತಿಷ್ಟು ಹೆಚ್ಚು ಅಥವಾ ಶೇಕಡವಾರು ಇಂತಿಷ್ಟು ಕಡಿಮೆ ಎಂದು ಸ್ಪಷ್ಟವಾಗಿ ನಮೂದಿಸತಕ್ಕದ್ದು.
5. ಕಾಮಗಾರಿಗಳನ್ನು ಸಮರ್ಪಕವಾಗಿ ಪೂರ್ಣಗೊಳಿಸಿದ ಬಗ್ಗೆ ವಲಯ ಅರಣ್ಯಾಧಿಕಾರಿಗಳು, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರಿಂದ ತಪಾಸಣೆಯನ್ನು ಕಡ್ಡಾಯವಾಗಿ ಮಾಡಿಸತಕ್ಕದ್ದು.

6. ಆಯಾಯ ಯೋಜನೆಯಡಿಯಲ್ಲಿನ ಕಾಮಗಾರಿಗಳನ್ನು ನಿಗಧಿತ ಅವಧಿಯೊಳಗೆ ಅಂದರೆ (31.01.2007) ಪೂರ್ಣಗೊಳಿಸತಕ್ಕದ್ದು ಮತ್ತು ಹಣ ಪಾವತಿಗೆ ಆಯಾಯ ಶೀರ್ಷಿಕೆಯಡಿ ಹಣ ಬಿಡುಗಡೆಯಾದ ನಂತರವೇ ಈ ಕಛೇರಿಯಿಂದ ಪಾವತಿಸಲು ಕ್ರಮ ಕೈಗೊಳ್ಳಲಾಗುವುದು.
7. ನಿಗಧಿತ ಸಮಯದೊಳಗಾಗಿ ಕಾಮಗಾರಿಗಳನ್ನು ಪೂರ್ಣಗೊಳಿಸದೇ ಇದ್ದಲ್ಲಿ ಭದ್ರತಾ ಠೇವಣಿ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಕಾಮಗಾರಿಗಳನ್ನು ಮರು ಟೆಂಡರ್ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ ಮಾಡಿಸಲಾಗುವುದು. ಒಂದೊಮ್ಮೆ ವೆಚ್ಚವು ಮಂಜೂರಾದ ಮೊತ್ತಕ್ಕಿಂತ ಹೆಚ್ಚಿಗೆ ಆದಲ್ಲಿ ಮೂಲ ಟೆಂಡರ್‌ದಾರರಿಂದ ವಸೂಲಿ ಮಾಡಲಾಗುವುದು. ಉಳಿಕೆ ಆದಲ್ಲಿ ಟೆಂಡರ್‌ದಾರರು ಉಳಿಕೆ ಹಣಕ್ಕೆ ಬಾದ್ಯಸ್ಥರಾಗಿರುವುದಿಲ್ಲ.
8. ಯಶಸ್ವಿ ಟೆಂಡರ್‌ದಾರರು ಕಾಮಗಾರಿ ಪ್ರಾರಂಭಿಸುವ ಮುನ್ನ ಈ ಕಛೇರಿಯಲ್ಲಿ ಭದ್ರತಾ ಠೇವಣಿಯನ್ನು ಜಮಾ ಮಾಡಿ ಟೆಂಡರ್ ಕರಾರು ಒಪ್ಪಂದ ಮಾಡಿಕೊಂಡು ಕಾರ್ಯದೇಶ ಪಡೆದು ಕಾಮಗಾರಿ ಪ್ರಾರಂಭಿಸತಕ್ಕದ್ದು.
9. ರಿಪ್ಪಿಂಗ್ ಕಾಮಗಾರಿಯನ್ನು ಹೊರತುಪಡಿಸಿ ಗುಂಡಿ ತೆಗೆಯುವುದು, ಜಾನುವಾರು ನಿರೋಧಕ ಕಂದಕ ತೆಗೆಯುವ ಕಾಮಗಾರಿಯನ್ನು ಸ್ಥಳೀಯ ಕೂಲಿಗಾರರಿಂದಲೇ ನಿರ್ವಹಿಸತಕ್ಕದ್ದು ಯಾವುದೇ ಸಂದರ್ಭದಲ್ಲಿ ಯಾವುದೇ ಕಾರಣಕ್ಕೂ ಯಂತ್ರಗಳನ್ನು ಬಳಸುವಂತಿಲ್ಲ ಸದರಿ ಕಾಮಗಾರಿಗಳಿಗೆ ಯಂತ್ರಗಳನ್ನು ಬಳಸಿದಲ್ಲಿ ಯಂತ್ರಗಳಿಂದ ಅನುಷ್ಠಾನಗೊಳಿಸಲು ಮಂಜೂರಾದ ದರ ಅಥವಾ ಗುತ್ತಿಗೆದಾರರು ನಮೂದಿಸಿದ ದರಗಳಲ್ಲಿ ಯಾವುದು ಕಡಿಮೆಯೋ ಅದನ್ನು ಮಾತ್ರ ಪಾವತಿಸಲಾಗುವುದು.
10. ರಿಪ್ಪಿಂಗ್ ಮಾಡಬೇಕಾದ ಆಳ ಕನಿಷ್ಟ 75 ಸೆ.ಮೀ ಮತ್ತು ಅಗಲ ಕನಿಷ್ಟ 45 ಸೆ.ಮೀಗಿಂತ ಕಡಿಮೆ ಇರಕೂಡದು.
11. ಯಾವುದೇ ಕಾರಣದಿಂದ ಮೇಲ್ಕಂಡ ದಿನಾಂಕದಂದು ಟೆಂಡರ್ ಜರುಗದಿದ್ದಲ್ಲಿ ಮರು ಟೆಂಡರ್‌ನ್ನು ಮೇಲಿನ ಷರತ್ತುಗಳಿಗೊಳಪಟ್ಟಂತೆ ದಿನಾಂಕ: 22.11.2007 ರಂದು ನಡೆಸಲಾಗುವುದು.
12. ಬುಲ್ಡೋಜರ್ ಸಾಗಾಣಿಕೆಗಾಗಿ ಪ್ರತ್ಯೇಕ ವೆಚ್ಚವನ್ನು ನೀಡಲಾಗುವುದಿಲ್ಲ.
13. ಇ.ಎಂ.ಡಿ. ಮೊತ್ತವನ್ನು (ಭದ್ರತಾ ಠೇವಣಿಯನ್ನು) ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ದಾವಣಗೆರೆ ವಿಭಾಗ, ದಾವಣಗೆರೆ (Deputy Conservator of Forests, Davanagere Division) ಇವರ ಪದನಾಮಕ್ಕೆ ತೆಗೆಯಿಸಿ ದಾವಣಗೆರೆಯಲ್ಲಿ ಪಾವತಿಯಾಗುವಂತೆ ಇರತಕ್ಕದ್ದು.
14. ಷೆಡ್ಯೂಲ್‌ನಲ್ಲಿ ತಿಳಿಸಿರುವ ಪ್ರಮಾಣಗಳು ಅಂದಾಜು ಪ್ರಮಾಣಗಳಾಗಿದ್ದು ಹೆಚ್ಚು ಅಥವಾ ಕಡಿಮೆಯಾಗುವ ಸಾಧ್ಯತೆಗಳಿದ್ದು ಇದಕ್ಕೆ ಬದ್ದರಾಗಿರತಕ್ಕದ್ದು.
15. ಇನ್ನೂ ವಿವರವಾದ ಷರತ್ತುಗಳಿಗಾಗಿ / ಹೆಚ್ಚಿನ ವಿವರಗಳಿಗಾಗಿ ಈ ಕಾರ್ಯಾಲಯದಲ್ಲಿ ಕೆಲಸದ ದಿವಸಗಳಲ್ಲಿ ಕಛೇರಿಯ ವೇಳೆಯಲ್ಲಿ ಸಂಪರ್ಕಿಸತಕ್ಕದ್ದು.

ಎಸ್. ಮುತ್ತಯ್ಯ
ಪಿ.ಆರ್. 656 ಉಪ ಅರಣ್ಯ ಸಂರಕ್ಷಣಾಧಿಕಾರಿ
ದಾವಣಗೆರೆ ವಿಭಾಗ, ದಾವಣಗೆರೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 11 ಡಿಎಸ್‌ಡಬ್ಲ್ಯೂ 2007, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2007**

**ವಿಷಯ:** ವಿಕಾಸಸೌಧ ಕಟ್ಟಡದಲ್ಲಿರುವ ಸಚಿವಾಲಯದ ಉಪಾಹಾರ ಮಂದಿರವನ್ನು ನಡೆಸಲು ಗುತ್ತಿಗೆ ನೀಡುವ ಸಂಬಂಧ ಟೆಂಡರ್ ಕರೆಯುವ ಬಗ್ಗೆ.

ವಿಕಾಸಸೌಧ ಕಟ್ಟಡದಲ್ಲಿರುವ ಸಚಿವಾಲಯದ ಉಪಾಹಾರ ಮಂದಿರವನ್ನು ನಡೆಸಲು ಗುತ್ತಿಗೆ ನೀಡುವ ಸಂಬಂಧ ಕರೆಯಲಾಗಿದ್ದ ಟೆಂಡರ್ ಅಧಿಸೂಚನೆ ಸಂಖ್ಯೆ: ಸಿಆಸುಇ 11 ಡಿಎಸ್‌ಡಬ್ಲ್ಯೂ 2007, ದಿನಾಂಕ: 23.06.2007ನ್ನು ಈ ಮೂಲಕ ರದ್ದುಗೊಳಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಕೆ.ಎಸ್. ಮಂಜುನಾಥ್
ಪಿ.ಆರ್. 657 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

**FORM - IV**
**(See Rule 12)**
**NOTICE**

It is hereby notified that the undersigned has changed his/her name from **SHIVANAND NEELAPPA GANIGER** to **SHIVANAND NEELAPPA PATIL**

P.D. 157 **SHIVANAND NEELAPPA GANIGER**

**ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ**
**ಜಂಟಿ ನಿರ್ದೇಶಕರವರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ**
**ಪ್ರಕಟಣೆ**

**ಸಂ.ಜಿಕೈಕೇ/ಶಿ/ಅಧೀ/ಅ.ಪೀ.ವಿ/2007-08, ಶಿವಮೊಗ್ಗ, ದಿನಾಂಕ: 9ನೇ ಅಕ್ಟೋಬರ್ 2007**

**ವಿಷಯ:** ಕಛೇರಿಯ ಅನುಪಯುಕ್ತ ಪೀಠೋಪಕರಣಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಕಛೇರಿಯ ಹಾಗೂ ರದ್ದಾದ ತಾಲ್ಲೂಕು ಕೈಗಾರಿಕಾ ಕೇಂದ್ರ ಕಛೇರಿಗಳ ರೂ.149023/- ಮೊಬಲಗಿನ ಅನುಪಯುಕ್ತ ಪೀಠೋಪಕರಣಗಳನ್ನು ದಿನಾಂಕ:29.11.2007ರ ಗುರುವಾರದಂದು ಮಧ್ಯಾಹ್ನ 3.30 ಗಂಟೆಗೆ ಜಂಟಿ ನಿರ್ದೇಶಕರ ಕಛೇರಿ ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗದ ಆವರಣದಲ್ಲಿ ಹರಾಜು ಮಾಡಲಾಗುವುದು. ಹರಾಜಿನ ನಿಯಮಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಪಡೆದುಕೊಳ್ಳಬಹುದಾಗಿರುತ್ತದೆ.

ಜಂಟಿ ನಿರ್ದೇಶಕರು,
ಪಿ.ಆರ್. 666 ಜಿಲ್ಲಾ ಕೈಗಾರಿಕಾ ಕೇಂದ್ರ, ಶಿವಮೊಗ್ಗ

**ಪೊಲೀಸ್ ಇಲಾಖೆ**
**ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರು**
**ಅಧಿಸೂಚನೆ**

**ಸಂ.33/ಸಿಬ್ಬಂದಿ1/2007-08, ದಿನಾಂಕ: 26ನೇ ಅಕ್ಟೋಬರ್ 2007**

**ವಿಷಯ:** ಕರಾಮೀಪೊ, 7ನೇ ಪಡೆ, ಮಂಗಳೂರು ಘಟಕಕ್ಕೆ ಬೇಕಾದ ಅನುಯಾಯಿಗಳ ವಿವಿಧ ಹುದ್ದೆಗಳಿಗೆ ನೇರ ನೇಮಕಾತಿ ಕುರಿತು.

**ಉಲ್ಲೇಖ:** ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನೇಮಕಾತಿ ನಿಯಮಗಳು 2004.

ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರು ಘಟಕದಲ್ಲಿ ಖಾಲಿ ಇರುವ ವಿವಿಧ ಪುರುಷ ಅನುಯಾಯಿಗಳ ಹುದ್ದೆಗಳನ್ನು ನೇರ ನೇಮಕಾತಿ ಮುಖಾಂತರ ಭರ್ತಿ ಮಾಡಲು ಕರ್ನಾಟಕ ರಾಜ್ಯ ಮೀಸಲು ಪೊಲೀಸ್, (ನೇಮಕಾತಿ ಮತ್ತು ಸೇವಾ ಷರತ್ತುಗಳು) ನೇಮಕಾತಿ 2004ರನ್ವಯ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿದೆ. ಅಧಿಕೃತವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ:05.11.2007 ರಿಂದ 20.11.2007 ರವರೆಗೆ ಕಮಾಂಡೆಂಟ್, ಕರಾಮೀಪೊ, 7ನೇ ಪಡೆ, ಅಸೈಗೋಳಿ, ಮಂಗಳೂರುರವರಿಗೆ ಬೆಳಿಗ್ಗೆ 10-00 ರಿಂದ ಸಂಜೆ 17-00 ಗಂಟೆಯವರೆಗೆ ಎಲ್ಲಾ ಕೆಲಸದ ದಿನಗಳಲ್ಲಿ ಖುದ್ದಾಗಿ ಅಥವಾ ಕೋರಿಯರ್ ಹಾಗೂ ಅಂಚೆಯ ಮುಖಾಂತರ ಕಳುಹಿಸಬಹುದಾಗಿದೆ. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅರ್ಜಿಗಳನ್ನು ಪೂರ್ಣವಾಗಿ ಭರ್ತಿ ಮಾಡದೆ ಅಪೂರ್ಣವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರು ಘಟಕಕ್ಕೆ ಅನುಯಾಯಿ ಹುದ್ದೆಗೆ ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ರಾಜ್ಯದ ಎಲ್ಲಾ ಪ್ರದೇಶದ ಹಾಗೂ ತುರ್ತು ಕರೆ ಬಂದಾಗ ದೇಶದ ಯಾವುದೇ ಸ್ಥಳದಲ್ಲಾದರೂ ಕರ್ತವ್ಯ ನಿರ್ವಹಿಸಬೇಕಾಗಿರುತ್ತದೆ.

**ನೇಮಕಾತಿ ಮಾಡುವ ಹುದ್ದೆಗಳ ವಿವರಗಳು**

| | | | |
|---|---|---|---|
| 1) | ಅಗಸ | - | 04 ಹುದ್ದೆಗಳು |
| 2) | ಕ್ಷೌರಿಕ | - | 01 ಹುದ್ದೆ |
| 3) | ಅಡುಗೆಯವರು | - | 02 ಹುದ್ದೆಗಳು |
| 4) | ಕಸಗುಡಿಸುವವರು | - | 01 ಹುದ್ದೆ |
| 5) | ದರ್ಜಿಯವರು | - | 01 ಹುದ್ದೆ |
| | **ಒಟ್ಟು** | | **09 ಹುದ್ದೆಗಳು** |

1) ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರು ಘಟಕದಲ್ಲಿ ರಿಕ್ತ ಸ್ಥಾನವಿರುವ ಪುರುಷ ಅನುಯಾಯಿ 'ಡಿ' ದರ್ಜೆ ಹುದ್ದೆಗಳ ನೇಮಕಾತಿ ಬಗ್ಗೆ ವರ್ಗೀಕರಣ ಈ ಕೆಳಗೆ ತೋರಿಸಲಾಗಿದ್ದು, ಈ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿರುತ್ತದೆ ಮತ್ತು ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.

**ಹುದ್ದೆಗಳ ವಿವರ ಮತ್ತು ಪ್ರವರ್ಗ**

| ವರ್ಗ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಯಿಂದ ನಿರಾಶ್ರಿತಗೊಂಡವರು | ಇತರರು | ಒಟ್ಟು ಹುದ್ದೆಗಳ ಸಂಖ್ಯೆ |
|---|---|---|---|---|---|
| ಸಾಮಾನ್ಯ ವರ್ಗ | 01 | 01 | 01 | 02 | 05 |
| ಪರಿಶಿಷ್ಟ ಜಾತಿ | - | - | - | 01 | 01 |
| ಪರಿಶಿಷ್ಟ ಪಂಗಡ | - | - | - | - | - |

| ವರ್ಗ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಯಿಂದ ನಿರಾಶ್ರಿತಗೊಂಡವರು | ಇತರರು | ಒಟ್ಟು ಹುದ್ದೆಗಳ ಸಂಖ್ಯೆ |
|---|---|---|---|---|---|
| ಪ್ರವರ್ಗ-1 | - | - | - | - | - |
| ಪ್ರವರ್ಗ-2ಎ | 01 | - | - | - | 01 |
| ಪ್ರವರ್ಗ-2ಬಿ | - | - | - | 01 | 01 |
| ಪ್ರವರ್ಗ-3ಎ | - | - | - | - | - |
| ಪ್ರವರ್ಗ-3ಬಿ | - | - | - | 01 | 01 |
| **ಒಟ್ಟು** | **02** | **01** | **01** | **05** | **09** |

**ಟಿಪ್ಪಣಿ:** 1) ಗ್ರಾಮೀಣ, ಮಾಜಿ ಸೈನಿಕರು, ಯೋಜನೆಯಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಮೇಲೆ ನಮೂದಿಸಿದ ಪ್ರವರ್ಗ/ಇತರೆ ಅಭ್ಯರ್ಥಿಗಳಿಂದ ಹುದ್ದೆಗಳನ್ನು ತುಂಬಲಾಗುವುದು.

II) **ವಯೋಮಿತಿ:** ಅನುಯಾಯಿ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗೆ ಕನಿಷ್ಟ 19 ವರ್ಷ ವಯಸ್ಸಾಗಿರಬೇಕು ಮತ್ತು ಕೆಳಕಂಡ ಗರಿಷ್ಠ ವಯೋಮಿತಿ ಮೀರಿರಬಾರದು.

1) ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಹಿಂದುಳಿದ ವರ್ಗಕ್ಕೆ ಗರಿಷ್ಠ ವಯೋಮಿತಿ - 30 ವರ್ಷ.

2) ಸಾಮಾನ್ಯ ವರ್ಗದ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿ - 25 ವರ್ಷ

3) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಸೈನ್ಯ ನಿಯೋಜನೆ, ಸೈನ್ಯದಿಂದ ತೆಗೆದು ಹಾಕಿದ ಹಾಗೂ ಸ್ವಯಂ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ ಅವರು ಸೇವೆ ಸಲ್ಲಿಸಿದ ಸೇವಾ ಅವಧಿ ಜೊತೆ ಹೆಚ್ಚುವರಿ ಮೂರು ವರ್ಷಗಳ ರಿಯಾಯತಿಯನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

**ವಿದ್ಯಾರ್ಹತೆ:** ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರು ಘಟಕಕ್ಕೆ ಅನುಯಾಯಿಗಳ ಹುದ್ದೆಗೆ ನೇಮಕಾತಿ ಬಯಸುವವರು ಕನಿಷ್ಠ 7ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣತೆ ಹೊಂದಿರಲೇಬೇಕು.

**ವೇತನ ಶ್ರೇಣಿ:** ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರು ಘಟಕದ ಅನುಯಾಯಿ ಹುದ್ದೆಯ ವೇತನ ಶ್ರೇಣಿ ರೂ. 5200.00 ರಿಂದ 8200.00 ಆಗಿರುತ್ತದೆ.

III) **ಲಿಖಿತ ಪರೀಕ್ಷೆ:**

ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಸ್ವೀಕರಿಸಿದ ನಂತರ ಅಭ್ಯರ್ಥಿಗಳಿಗೆ 50 ಅಂಕಗಳಿಗೆ ಕನ್ನಡ ಭಾಷೆಯಲ್ಲಿ ಪ್ರಬಂಧ ಲಿಖಿತ ಪರೀಕ್ಷೆಗೆ ಒಳಪಡಿಸಲಾಗುವುದು. ಈ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಅರ್ಹ ಅಭ್ಯರ್ಥಿಗಳಿಗೆ 1:5ರ ಪ್ರಮಾಣದಲ್ಲಿ 50 ಅಂಕಗಳ ವೃತ್ತಿಪರ ಪರೀಕ್ಷೆಗೆ ಒಳಪಡಿಸಲಾಗುವುದು. ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕ ಮತ್ತು ವೃತ್ತಿ ಕೌಶಲ್ಯದಲ್ಲಿ ಗಳಿಸಿದ ಅಂಕಗಳನ್ನು ಒಟ್ಟುಗೂಡಿಸಿ ಪಡೆದ ಅಂಕಗಳ ಆಧಾರದ ಮೇಲೆ ಹಾಗೂ ವೃತ್ತಿ ಪರತೆಯಲ್ಲಿ ಕನಿಷ್ಟ 3 ರಿಂದ 5 ವರ್ಷ ಅನುಭವ ಹೊಂದಿದ ಅರ್ಹ ಅಭ್ಯರ್ಥಿಗಳನ್ನು ಆಯಾಯ ಹುದ್ದೆಗೆ ನೇಮಕಾತಿ ಮಾಡಿಕೊಳ್ಳಲಾಗುವುದು.

**ದೇಹದಾಢ್ಯ ಪರೀಕ್ಷೆ:**

1) ಅಭ್ಯರ್ಥಿಯು ಸಾಮಾನ್ಯೇತರ ಹಾಗೂ ಸದೃಡತೆ ಹಾಗೂ ಉತ್ತಮ ಆರೋಗ್ಯವನ್ನು ಹೊಂದಿದವನಾಗಿರಬೇಕು.

2) ಕಣ್ಣಿನ ದೃಷ್ಟಿ

| | ಉತ್ತಮ | | ಕನಿಷ್ಠ |
|---|---|---|---|
| ದೂರ ದೃಷ್ಠಿ | 6/9 | ಅಥವಾ | 6/9 |
| | 6/9 | | 6/12 |
| ಸಮೀಪ ದೃಷ್ಠಿ | 0/6 | | 0/08 |

ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಠಿ ಹೊಂದಿರಬೇಕು. ವರ್ಣಾಂದತೆ, ಮೆಳ್ಳಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆಯೆಂದು ಪರಿಗಣಿಸಲಾಗುವುದು

IV ಈ ಅಧಿಸೂಚನೆಯ ಪ್ರತಿಗಳನ್ನು ಕಮಾಂಡೆಂಟ್, 1, 3, 4 ಹಾಗೂ 9ನೇ ಪಡೆ, ಬೆಂಗಳೂರು, ಕಮಾಂಡೆಂಟ್, 2, 5, 6, 8, 10 ಹಾಗೂ 11ನೇ ಪಡೆ, ಕ್ರಮವಾಗಿ ಬೆಳಗಾಂ, ಮೈಸೂರು, ಗುಲ್ಬರ್ಗಾ, ಶಿವಮೊಗ್ಗ, ಶಿಗ್ಗಾಂವ್ ಮತ್ತು ಹಾಸನ ರವರ ಕಛೇರಿ, ಕಮಾಂಡೆಂಟ್, ಇಂಡಿಯಾ ರಿಸರ್ವ್ ಬೆಟಾಲಿಯನ್, ಮುನಿರಾಬಾದ್, ಕೊಪ್ಪಳ ಜಿಲ್ಲೆರವರ ಕಛೇರಿಗಳಲ್ಲದೆ ಎಲ್ಲಾ ಜಿಲ್ಲಾ ಪೊಲೀಸ್, ಕೇಂದ್ರ ಕಛೇರಿಯವರ ಸೂಚನಾ ಫಲಕದಲ್ಲಿ ಪ್ರದರ್ಶಿಸಲಾಗಿರುತ್ತದೆ.

V ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರು ಅನುಯಾಯಿ ಹುದ್ದೆಗಳಿಗೆ ಅರ್ಜಿಗಳನ್ನು ಈ ಕೆಳಕಂಡ ನಮೂನೆಯಲ್ಲಿ ಭರ್ತಿ ಮಾಡಿ ಸಲ್ಲಿಸಲು ಸೂಚಿಸಲಾಗಿದೆ.

**ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರು**

**ಅರ್ಜಿ ನಮೂನೆ**

ಗೆ,

ಕಮಾಂಡೆಂಟ್,
ಕರಾಮೀಪೊ, 7ನೇ ಪಡೆ,
ಅಸೈಗೋಳಿ, ಮಂಗಳೂರು,
ದಕ್ಷಿಣ ಕನ್ನಡ ಜಿಲ್ಲೆ-574199

ಪಾಸ್ ಪೋರ್ಟ್ ಸೈಜಿನ ಭಾವ ಚಿತ್ರ 1 + 2

ಮಾನ್ಯರೇ,

**ವಿಷಯ:** ಕರಾಮೀಪೊ, 7ನೇ ಪಡೆ, ಮಂಗಳೂರು ಘಟಕದಲ್ಲಿ ಖಾಲಿ ಇರುವ ------------------ ಅನುಯಾಯಿ ಹುದ್ದೆಗೆ ಸಲ್ಲಿಸಿದ ಅರ್ಜಿ.

**ಉಲ್ಲೇಖ:** ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆ, ಮಂಗಳೂರಿನ ಅಧಿಸೂಚನೆ ಸಂ:33/ಸಿಬ್ಬಂದಿ (1)/2007-08 ದಿನಾಂಕ: 26.10.2007.

| | | |
|---|---|---|
| 1 | ಅಭ್ಯರ್ಥಿಯ ಪೂರ್ಣ ಹೆಸರು (ದಪ್ಪ ಅಕ್ಷರಗಳಲ್ಲಿ) | |
| 2 | ತಂದೆಯ ಹೆಸರು | |
| 3 | ಜನ್ಮ ದಿನಾಂಕ | |
| 4 | ವಿದ್ಯಾರ್ಹತೆ | |
| 5 | ಜಾತಿ/ಪ್ರವರ್ಗ | |
| 6 | ವೃತ್ತಿ ಪರತೆ | |
| 7 | ವೈದ್ಯಕೀಯ ಪ್ರಮಾಣ ಪತ್ರ | |
| 8 | ಓದಿದ ಶಾಲೆಯ ಹೆಸರು | |
| 9 | ಮಾಜಿ ಸೈನಿಕ | |
| 10 | ಯೋಜನಾ ನಿರಾಶ್ರಿತರು | |
| 11 | ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರ | |
| 12 | ಖಾಯಂ ವಿಳಾಸ | |
| 13 | ಅಂಚೆ ವಿಳಾಸ | |

**ಘೋಷಣೆ:** ಅರ್ಜಿಯಲ್ಲಿ ನೀಡಿದ ಮಾಹಿತಿಯು ಸಮರ್ಪಕವಾಗಿದೆ. ಇದು ಸುಳ್ಳೆಂದು ಕಂಡು ಬಂದಲ್ಲಿ ಆಯ್ಕೆ ಪ್ರಾಧಿಕಾರವು ಈ ಹುದ್ದೆಯ ಆಯ್ಕೆ ಸಂದರ್ಶನವನ್ನು ನಿರಾಕರಿಸಬಹುದು.

ದಿನಾಂಕ: ತಮ್ಮ ನಂಬುಗೆಯ,

ಸ್ಥಳ: ಅಭ್ಯರ್ಥಿಯ ಹೆಸರು ಮತ್ತು ಸಹಿ

**ಸೂಚನೆ:** 1) ಹೆಚ್ಚಿನ ವಿವರಗಳು ಬೇಕಾದಲ್ಲಿ ಕಮಾಂಡೆಂಟ್, ಕರಾಮೀಪೊ, 7ನೇ ಪಡೆ, ಮಂಗಳೂರುರವರ ಕಛೇರಿಗೆ ಕಛೇರಿಯ ಸಮಯದಲ್ಲಿ ಖುದ್ದಾಗಿ ಭೇಟಿ ನೀಡಿ ಅಥವಾ ದೂರವಾಣಿ ಸಂಖ್ಯೆ: 0824-2220546 ರಿಂದ ವಿವರ ಪಡೆಯಬಹುದಾಗಿದೆ.

2) ಕ್ರಮ ಸಂಖ್ಯೆ 3 ರಿಂದ 11 ರವರೆಗೆ ದೃಢೀಕೃತ ದಾಖಲಾತಿಯ ನಕಲು ಪ್ರತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಹಾಗೂ ರೂ.5/- ಅಂಚೆ ಚೀಟಿ ಲಗತ್ತಿಸಿ 9" X 4 ಕವರಿನ ಮೇಲೆ ಸ್ವವಿಳಾಸ ಬರೆದು ಸಲ್ಲಿಸುವುದು.

ಕಮಾಂಡೆಂಟ್,

ಪಿ.ಆರ್. 669 7ನೇ ಪಡೆ, ಕರಾಮೀಪೊ, ಮಂಗಳೂರು.

**ಕಮಾಂಡೆಂಟ್, 9ನೇ ಪಡೆ, ಕೆಎಸ್‌ಆರ್‌ಪಿ, ಕೂಡ್ಲು, ಹೊಸೂರು ಸರ್ಜಾಪುರ ರಸ್ತೆ, ಬೆಂಗಳೂರು - 560 099**

**ರವರ ಅಧಿಸೂಚನೆ ಸಂಖ್ಯೆ.ಸಿಬ್ಬಂದಿ(1)/69/2006-07, ದಿನಾಂಕ: 29ನೇ ಅಕ್ಟೋಬರ್ 2007**

**ಅನುಯಾಯಿ ಹುದ್ದೆಗಳಿಗಾಗಿ ಅರ್ಜಿ ಆಹ್ವಾನ**

ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ಕೆಎಸ್‌ಆರ್‌ಪಿ), 9ನೇ ಪಡೆ, ಬೆಂಗಳೂರು ಇಲ್ಲಿ ಖಾಲಿ ಇರುವ ಪುರುಷ ಅನುಯಾಯಿ ಹುದ್ದೆಗಳ ನೇಮಕಕ್ಕೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಖಾಲಿ ಇರುವ ಹುದ್ದೆಗಳ ವಿವರ ಈ ಕೆಳಗಿನಂತಿರುತ್ತದೆ.

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | ಮೀಸಲಾತಿ | |
|---|---|---|---|---|
| 1. | ಅಡುಗೆಯವರು | 8 | ಜಿಎಂ-4 | ಗ್ರಾಮೀಣ-2 ಮಾಜಿ ಸೈನಿಕ-1, ಇತರೆ ಅಭ್ಯರ್ಥಿ–1 |
| | | | ಎಸ್‌ಸಿ-2 | ಗ್ರಾಮೀಣ-1, ಮಾಜಿ ಸೈನಿಕ-1 |
| | | | 2ಎ-1 | ಗ್ರಾಮೀಣ ಅಭ್ಯರ್ಥಿ |
| | | | ಪ್ರವರ್ಗ-1 | ಗ್ರಾಮೀಣ ಅಭ್ಯರ್ಥಿ |
| 2. | ಅಗಸರು | 2 | ಜಿಎಂ-1 | |
| | | | 2ಬಿ-1 | ಗ್ರಾಮೀಣ ಅಭ್ಯರ್ಥಿ |
| 3. | ಕ್ಷೌರಿಕರು | 1 | ಜಿಎಂ-1 | |
| 4. | ಬಡಿಗರು | 1 | 2ಎ-1 | ಮಾಜಿ ಸೈನಿಕರು |
| 5. | ಸಿಂಪಿಗರು | 1 | ಜಿಎಂ-1 | |
| | **ಒಟ್ಟು ಹುದ್ದೆಗಳು** | 13 | | |

**ವಿದ್ಯಾರ್ಹತೆ:** 7ನೇ ತರಗತಿ ಪಾಸಾಗಿರಬೇಕು, ಕನ್ನಡ ಓದಲು ಬರೆಯಲು ಬರಬೇಕು.

**ದೈಹಿಕ ಅರ್ಹತೆ:** 1) ದೃಡಕಾಯವಾಗಿರಬೇಕು, ತೊದಲು ಮಾತನಾಡುವ, ಕಿವಿ ಕೇಳದಿರುವ ದೃಷ್ಟಿ ಮಾಂದ್ಯತೆ, ಚರ್ಮ ರೋಗ, ಹೃದಯ ಬೇನೆ, ದೈಹಿಕ ಅನರ್ಹತೆ ಇರುವ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದಿಲ್ಲ.

| 2) ಕಣ್ಣಿನ ದೃಷ್ಟಿ | ಉತ್ತಮ | | ಕನಿಷ್ಠ |
|---|---|---|---|
| ದೂರ ದೃಷ್ಟಿ | 6/9 | ಅಥವಾ | 6/9 |
| | 6/9 | | 6/12 |
| ಸಮೀಪ ದೃಷ್ಟಿ | 0/6 | | 0/08 |

ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು. ಇರುಳು ಕುರುಡು, ಬಣ್ಣ ಕುರುಡಿನಂತಹ, ವರ್ಣಾಂದತೆ, ಮೆಳ್ಳಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆಯೆಂದು ಪರಿಗಣಿಸಲಾಗುವುದು

**ಅನುಭವ:** ಅರ್ಜಿದಾರರು ಯಾವ ವೃತ್ತಿಯ ಹುದ್ದೆಗೆ ಅರ್ಜಿ ಸಲ್ಲಿಸುವರೊ ಆ ವೃತ್ತಿಯಲ್ಲಿ ಕನಿಷ್ಟ ಮೂರು (3) ವರ್ಷಗಳ ಅನುಭವ ಹೊಂದಿರಬೇಕು.

**ವಯೋಮಿತಿ:** ಕನಿಷ್ಠ 19 ವರ್ಷ ಪೂರ್ಣಗೊಳಿಸಿರಬೇಕು. ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ಮತ್ತು ಹಿಂದುಳಿದ ವರ್ಗಗಳ (ಪ್ರವರ್ಗ-1, 2ಎ, 2ಬಿ) ಅಭ್ಯರ್ಥಿಗಳಿಗೆ 30 ವರ್ಷ ಮೀರಿರಬಾರದು. ಮತ್ತು ಸಾಮಾನ್ಯ ಅಭ್ಯರ್ಥಿಗಳಿಗೆ 25 ವರ್ಷ ಮೀರಿರಬಾರದು. ಮಾಜಿ ಸೈನಿಕರು ಭೂದಳ ಹಾಗೂ ವಾಯುದಳದಲ್ಲಿ ಮಾತ್ರ ಸೇವೆ ಸಲ್ಲಿಸಿರಬೇಕು. (ಮಾಜಿ ಸೈನಿಕರಿಗೆ ವಯೋಮಿತಿ ಸಡಿಲಿಕೆ ಸರ್ಕಾರದ ಸುತ್ತೋಲೆ ಸಂ. ಸಿಆಸುಇ 163 ಸೆನೆನಿ 2006 ದಿನಾಂಕ:26.06.2007 ರಲ್ಲಿ ಸೂಚಿಸಿರುವಂತೆ) ಮಾಜಿ ಸೈನಿಕರಿಗೆ ಅವರು ಸಲ್ಲಿಸಿರುವ ಸೇವಾವಧಿಯ ಜೊತೆಗೆ ಮೂರು ವರ್ಷ ರಿಯಾಯಿತಿ ಇರುತ್ತದೆ. ಇದಕ್ಕೆ ಸೂಚಿಸಿರುವಂತೆ ದೃಢೀಕೃತ ದಾಖಲೆಯನ್ನು ಲಗತ್ತಿಸಿರಬೇಕು.

**ವೇತನ ಶ್ರೇಣಿ:** ರೂ. 5200-8200 ಹಾಗೂ ಸರ್ಕಾರದ ನಿಯಮಾನುಸಾರ ಇತರೆ ಭತ್ಯೆಗಳನ್ನು ನೀಡಲಾಗುವುದು.

**ಅರ್ಜಿ ಸಲ್ಲಿಸುವ ವಿಧಾನ:** ಎಲ್ಲಾ ಅಭ್ಯರ್ಥಿಗಳು ಈ ಅಧಿಸೂಚನೆಯೊಂದಿಗೆ ಕೊಟ್ಟಿರುವ ನಿಗದಿತ ನಮೂನೆಯ ಪ್ರಕಾರ ಅರ್ಜಿ ಸಲ್ಲಿಸಬೇಕು. ಅರ್ಜಿಯನ್ನು ಎ-4 ಸೈಜ್ ಬಿಳಿ ಹಾಳೆಯ ಮೇಲೆ ನಿಗದಿತ ನಮೂನೆಯಂತೆ ಬೆರಳಚ್ಚು ಮಾಡಿಸಿ ನಮೂನೆಯಲ್ಲಿ ವಿವರವನ್ನು ಸ್ಪಷ್ಟವಾಗಿ ತುಂಬಿರಬೇಕು ಅರ್ಜಿಯಲ್ಲಿ ಭಾವಚಿತ್ರವನ್ನು ನಿಗದಿಪಡಿಸಿದ ಸ್ಥಳದಲ್ಲಿ ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಭಾವ ಚಿತ್ರವನ್ನು ಅಂಟಿಸಿ ಪತ್ರಾಂಕಿತ ಅಧಿಕಾರಿಯವರಿಂದ ದೃಢೀಕರಿಸಿರಬೇಕು. ಅರ್ಜಿಯನ್ನು **ಕಮಾಂಡೆಂಟ್, 9ನೇ ಪಡೆ, ಕೂಡ್ಲು, ಹುಸ್ಕೂರು ಅಂಚೆ, ಆನೇಕಲ್ ತಾಲ್ಲೂಕು, ಹೊಸೂರು ಸರ್ಜಾಪುರ ರಸ್ತೆ, ಬೆಂಗಳೂರು - 560 099,** ಎಂದು ವಿಳಾಸ ಬರೆದು ಕಳುಹಿಸುವುದು. ಅರ್ಜಿಯೊಂದಿಗೆ ವಿದ್ಯಾರ್ಹತೆಯ ದೃಢೀಕೃತ ನಕಲು ಪ್ರತಿಯನ್ನು, ಗ್ರಾಮೀಣ ಮೀಸಲಾತಿ ಭಯಸುವ ಅಭ್ಯರ್ಥಿಗಳು ದಿನಾಂಕ:13.2.2004ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ಸೆನೆನಿ/2007 ರಲ್ಲಿ ನಿಗದಿಪಡಿಸಿದ ನಮೂನೆ - 2ರಲ್ಲಿ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲು ರುಜು ಪಡೆದ ಪ್ರಮಾಣ ಪತ್ರಗಳ ದೃಢೀಕೃತ ನಕಲುಗಳನ್ನು ಲಗತ್ತಿಸಬೇಕು. ಜಾತಿ ಹಾಗೂ ಇತರೆ ಮೀಸಲಾತಿಗೆ ಬಯಸುವ ಅಭ್ಯರ್ಥಿಗಳು ಸಂಬಂಧಿಸಿದ ಅಧಿಕಾರಿಗಳಿಂದ ಪಡೆದ ಊರ್ಜಿತವಾಗಿರುವ ನಕಲು ಪ್ರತಿಯನ್ನು ಲಗತ್ತಿಸತಕ್ಕದ್ದು. ವೃತ್ತಿ ಅನುಭವದ ಬಗ್ಗೆ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಲಗತ್ತಿಸತಕ್ಕದ್ದು.

ಅರ್ಜಿಯೊಂದಿಗೆ ಸ್ವವಿಳಾಸ ನಮೂದಿಸಿ 7" x 3" ಒಂದು ಲಕೋಟೆ ಮತ್ತು ರೂ. 5-00 ಗಳ ಪೋಸ್ಟಲ್ ಸ್ಟಾಂಪನ್ನು ಕಡ್ಡಾಯವಾಗಿ ಅಂಟಿಸಿರಬೇಕು. ಅರ್ಜಿಯನ್ನು ಸಲ್ಲಿಸುವಾಗ ಯಾವುದೇ ಶುಲ್ಕವನ್ನು ಪಾವತಿಸಬೇಕಾಗಿರುವುದಿಲ್ಲ. ಅರ್ಜಿಯನ್ನು

**ದಿನಾಂಕ:20.11.2007** ರೊಳಗಾಗಿ ಈ ಕಚೇರಿಯ ಮೇಲೆ ತಿಳಿಸಿದ ವಿಳಾಸಕ್ಕೆ ತಲುಪುವಂತೆ ಕಳುಹಿಸತಕ್ಕದ್ದು. ಸದರಿ ಅರ್ಜಿಗಳನ್ನು ಕಚೇರಿಯ ವೇಳೆಯಲ್ಲಿ (ರಜಾ ದಿನಗಳನ್ನು ಹೊರತುಪಡಿಸಿ) ಖುದ್ದಾಗಿ ಅಥವಾ ಕೋರಿಯರ್ ಹಾಗೂ ಅಂಚೆಯ ಮುಖಾಂತರ ಕಳುಹಿಸಬಹುದಾಗಿರುತ್ತದೆ. ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅರ್ಜಿಗಳನ್ನು ಪೂರ್ಣವಾಗಿ ಭರ್ತಿ ಮಾಡದೆ ಅಪೂರ್ಣವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅರ್ಜಿಯನ್ನು ಸಲ್ಲಿಸುವ ಮತ್ತು ಅರ್ಜಿಯೊಂದಿಗೆ ಕಳುಹಿಸುವ ಲಕೋಟೆಯ ಮೇಲೆ ಪೊಲೀಸ್ ಅನುಯಾಯಿ ಹುದ್ದೆಗೆ ಅರ್ಜಿ ಮತ್ತು ಯಾವ ವೃತ್ತಿ ಎಂದು ಬರೆದಿರಬೇಕು.

**ಲಿಖಿತ ಮತ್ತು ವೃತ್ತಿ ಪರೀಕ್ಷೆ:** ಸಂದರ್ಶನಕ್ಕೆ ಅರ್ಹರಾದ ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಹಾಜರಾಗಿ 50 ಅಂಕಗಳಿಗೆ ಕನ್ನಡದಲ್ಲಿ ಪ್ರಬಂಧವನ್ನು ಬರೆಯಬೇಕು. ಈ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಅರ್ಹ ಅಭ್ಯರ್ಥಿಗಳಿಗೆ 1:5 ರಂತೆ ವೃತ್ತಿ ಪರೀಕ್ಷೆ ಸಂದರ್ಶನಕ್ಕೆ ಕರೆಯಲಾಗುವುದು. ಲಿಖಿತ ಪರೀಕ್ಷೆ ಹಾಗೂ ವೃತ್ತಿ ಪರೀಕ್ಷೆಗಳಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗುವುದು.

ಕಮಾಂಡೆಂಟ್
9ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು.

**9ನೇ ಪಡೆ ಕೆ.ಎಸ್.ಆರ್.ಪಿ. ಕೂಡ್ಲು, ಬೆಂಗಳೂರು ಘಟಕದಲ್ಲಿ ಖಾಲಿ ಇರುವ ಅನುಯಾಯಿ ಹುದ್ದೆಗೆ ಅರ್ಜಿ**

**ಅರ್ಜಿ ನಮೂನೆ**

ಇತ್ತೀಚಿನ ಭಾವಚಿತ್ರ
ಪತ್ರಾಂಕಿತ ಅಧಿಕಾರಿಗಳಿಂದ
ದೃಢೀಕರಿಸಿರಬೇಕು

1 ಪೂರ್ಣ ಹೆಸರು (ದಪ್ಪ ಅಕ್ಷರಗಳಲ್ಲಿ)
2 ತಂದೆಯ ಹೆಸರು
3 ಹುಟ್ಟಿದ ದಿನಾಂಕ
4 ವಿದ್ಯಾರ್ಹತೆ
5 ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಕ್ಕೆ ವಯಸ್ಸು
6 ಜಾತಿ/ವರ್ಗ ಉಪಜಾತಿ (ಎಸ್‌ಸಿ/ಎಸ್‌ಟಿ/ಪ್ರವರ್ಗ-1/ 2ಎ/2ಬಿ/3ಎ/3ಬಿ/ಜಿಎಂ)
7 ಓದಿದ ಶಾಲೆಯ ಹೆಸರು
8 ಮಾಜಿ ಸೈನಿಕ/ಯೋಜನಾ ನಿರಾಶ್ರಿತರು
9 ಹುದ್ದೆಗೆ ಸಂಬಂಧಿಸಿದಂತೆ ಅನುಭವ
10 ಖಾಯಂ ವಿಳಾಸ --------------------------
--------------------------
--------------------------
ಪಿನ್ ಕೋಡ್----------------

**ಅಭ್ಯರ್ಥಿಯ ಪ್ರಮಾಣ ಮಾಡಿ ಹೇಳಿದ ಘೋಷಣೆ**

ನಾನು ಈ ಮೂಲಕ ಘೋಷಿಸುವುದೇನೆಂದರೆ ಸದರಿ ಅರ್ಜಿಯಲ್ಲಿ ತಿಳಿಸಿರುವ ಎಲ್ಲಾ ವಿವರಗಳು ನನಗೆ ತಿಳಿದಿರುವ ಮಟ್ಟಿಗೆ ಪೂರ್ಣವಾದವು ಮತ್ತು ಸರಿಯಾದವುಗಳಾಗಿವೆ. ಮೇಲೆ ತಿಳಿಸಿರುವ ಯಾವುದೇ ವಿವರಗಳು ಅಥವಾ ಮಾಹಿತಿ, ತಪ್ಪು ಅಥವಾ ಅಪೂರ್ಣ/ಸತ್ಯಕ್ಕೆ ದೂರವಾದದ್ದು ಎಂದು ಅಥವಾ ಅನರ್ಹ ಎಂದು ಕಂಡುಬಂದರೆ ತಕ್ಷಣದಲ್ಲಿ ಪರೀಕ್ಷೆಗೆ ನನ್ನ ಅಭ್ಯರ್ಥಿತನವನ್ನು ತಿರಸ್ಕರಿಸಬಹುದಾಗಿದೆ ಅಥವಾ ರದ್ದುಪಡಿಸಬಹುದು ಹಾಗೂ ನೇಮಕಾತಿ ಆದನಂತರ ಯಾವುದೇ ತಪ್ಪು ವಿವರ/ವ್ಯತ್ಯಾಸ ಕಂಡುಬಂದರೆ ನನಗೆ ಸೂಚನೆ ನೀಡದೆ ನನ್ನನ್ನು ಸೇವೆಯಿಂದ ವಜಾ ಮಾಡಬಹುದು ಎಂದು ನನಗೆ ತಿಳಿದಿದೆ.

ದಿನಾಂಕ: / /2007
ಸ್ಥಳ: ತಮ್ಮ ವಿಶ್ವಾಸಿ
ಪಿ.ಆರ್. 671 ಅಭ್ಯರ್ಥಿಯ ಸಹಿ

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83**

**ಅಲ್ಪಾವಧಿ ಟೆಂಡರು ಪ್ರಕಟಣೆ**

**ಸಂಖ್ಯೆ: ಎ1/ಬಬಪಾ/ಕಮೃಪಾ/ಸಫಾರಿ/2007-2008, ದಿನಾಂಕ: 25ನೇ ಅಕ್ಟೋಬರ್ 2007**

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಈ ಕೆಳಕಂಡ ಕಾಮಗಾರಿಗೆ ಟೆಂಡರ್ ಕರೆಯಲಾಗಿದೆ. ಟೆಂಡರು ಅರ್ಜಿಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ಲೋಕೋಪಯೋಗಿ ಇಲಾಖೆಯ 3ನೇ ದರ್ಜೆ ಮತ್ತು ಮೇಲ್ಪಟ್ಟ ದರ್ಜೆಯ ಗುತ್ತಿಗೆದಾರರು ಕಛೇರಿಯಲ್ಲಿ ಸಲ್ಲಿಸಲು ತಿಳಿಸಲಾಗಿದೆ.

**ಷೆಡ್ಯೂಲ್**

| ಕ್ರ. ಸಂ. | ಕಾಮಗಾರಿಯ ವಿವರಗಳು | ಟೆಂಡರಿನ ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಇ.ಎಂ.ಡಿ. ಹಣ | ಕೆಲಸ ಪೂರ್ಣಗೊಳಿಸಲು ಅವಧಿ |
|---|---|---|---|---|
| 1. | ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನ ಸಿಂಹ ಸಫಾರಿಯ ಹೊಸ ಗೇಟಿಗೆ ಹೊಸದಾಗಿ ಅಪ್ರೋಚ್ ರಸ್ತೆ ನಿರ್ಮಾಣ ಕಾಮಗಾರಿ | ರೂ. 6.40 ಲಕ್ಷ | ರೂ. 13,000/- | 30 ದಿನಗಳು |

**ಷರತ್ತು:**

1. ಟೆಂಡರ್‌ದಾರರು ರೂ 563/- (ಎಲ್ಲಾ ತೆರಿಗೆಗಳು ಸಹಿತ) ಟೆಂಡರು ಫಾರಂನ್ನು ಸಂಬಂಧಿಸಿದ ವಿವರವಾದ ಪ್ರಕಟಣೆಯನ್ನು ಸಹ ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ:14.11.2007 ರಿಂದ 16.11.2007 ರ ವರೆಗೆ ಪಡೆಯಬಹುದು.
2. ಟೆಂಡರನ್ನು ದಿನಾಂಕ: 17.11.2007 ರಂದು 3.00 ಗಂಟೆಯವರೆಗೆ ಸ್ವೀಕರಿಸಲಾಗುವುದು.
3. ದಿನಾಂಕ: 17.11.2007 ರಂದು ಟೆಂಡರ್ ಸಾಯಂಕಾಲ 4.00 ಗಂಟೆಗೆ ತೆರೆಯಲಾಗುವುದು.
4. ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಪಡೆಯುವುದು.

ಕಾರ್ಯನಿರ್ವಾಹಕ ನಿರ್ದೇಶಕರು,
ಬನ್ನೇರುಘಟ್ಟ, ಬಯಲಾಜಿಕಲ್ ಪಾರ್ಕ್,
ಬೆಂಗಳೂರು - 83

**ZOO AUTHORITY OF KARNATAKA**

**OFFICE OF THE EXECUTIVE DIRECTOR, BANNERGHATTA BIOLOGICAL PARK, BANGALORE-83**

**BRIEF SHORT TERM TENDER NOTIFICATION**

**A1 - BBP - ZAK - Safari / 2007 - 2008, Dated: 25th October 2007**

It is hereby notified for the general information of public that sealed tenders are invited and will be received in the above office from the reputed contractor of class III and above registered at Karnataka Public Works Department.

**SCHEDULE**

| Sl. No. | Particulars of Works | Amount put to tender In Lakhs | EMD to be furnished | Time for execution |
|---|---|---|---|---|
| 1. | Formation of approach to New gate at Lion Safari | Rs. 6.40 lakhs | Rs. 13,000/- | 30 days |

**Conditions:-**

1. The Tender form with detailed tender conditions can be had from office of the undersigned during the office hours from 14.11.2007 to 16.11.2007 on payment of Rs.563/- (including taxes).
2. Receipt of tender at 3 pm on 17.11.2007.
3. Opening of Tender at 3 pm on 17.11.2007.
4. Future details can be had from the office of the under signed.

Executive Director,
Bannerghatta Biological Park,
Bangalore - 83

P.D. 104

**ಲೋಕೋಪಯೋಗಿ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಮಂಗಳೂರು ವಿಭಾಗ, ಮಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ:8:ಜಿಎನ್‌ಎಲ್:ಟಿಎನ್‌ಡಿ:2007:2008ಜೆ೩-2, ದಿನಾಂಕ: 17ನೇ ಅಕ್ಟೋಬರ್ 2007**

ಆರ್.ಐ.ಡಿ.ಎಫ್-12 ನಬಾರ್ಡ್ ಯೋಜನೆಯಡಿಯಲ್ಲಿ ಈ ಕೆಳಕಂಡ ಕಾಮಗಾರಿಗಳಿಗೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ:21.11.2007 ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿಯೊಂದಿಗೆ ದಿನಾಂಕ:19.11.2007ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಚೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ:19.11.2007ರ ಸಂಜೆ:5.30ರ ತನಕ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ. ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಹೊರತುಪಡಿಸಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ.ಗಳಲ್ಲಿ) |
|---|---|---|---|---|---|---|---|
| 1. | ಪುತ್ತೂರು ತಾಲ್ಲೂಕಿನ ಕುಂತೂರು - ಇಡ್ಲ ರಸ್ತೆಯ ಪಾಲೆಚ್ಚಾರು ಎಂಬಲ್ಲಿ ಸೇತುವೆ ನಿರ್ಮಾಣ | 41.60 | ಒಂದನೇ ದರ್ಜೆ | 41600.00 | ಒಂಭತ್ತು ತಿಂಗಳು | ದರವಾರು | 3300.00 |
| 2. | ಪುತ್ತೂರು ತಾಲ್ಲೂಕಿನ ಕಾಣಿಯೂರು - ಮಾದೋಡಿ - ಪೆರುವಾಜೆ ರಸ್ತೆಯ ಮಾದೋಡಿ ಎಂಬಲ್ಲಿ ಸೇತುವೆ ನಿರ್ಮಾಣ | 38.35 | ಒಂದನೇ ದರ್ಜೆ | 38350.00 | ಒಂಭತ್ತು ತಿಂಗಳು | ದರವಾರು | 3300.00 |

**ಸೂಚನೆಗಳು:**

1. ಉದ್ದೇಶಿಸಿರುವ ಕಾಮಗಾರಿಯ ಶೇ. 30ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು.
2. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3. ಇ.ಎಂ.ಡಿ.ಯನ್ನು ಪ್ಲೆಜ್ಡ್ ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್, ಕಾಲ್ ಡಿಪೋಸಿಟ್ ರಶೀದಿ, ಮತ್ತು ಚಲನ್ ರೂಪದಲ್ಲಿ ಸಲ್ಲಿಸುವುದು.
4. ಗುತ್ತಿಗೆದಾರರು ಕೆಲಸವನ್ನು ನಿಗಧಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
5. ಗುತ್ತಿಗೆದಾರರು ಟೆಂಡರು ಬಗ್ಗೆ ಅರ್ಜಿ ಸಲ್ಲಿಸುವಾಗ ಈ ತರಹದ ಕೆಲಸವನ್ನು ಕೈಗೊಂಡವರಾಗಿದ್ದು ಅನುಭವ ಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
6. ಕಾಮಗಾರಿಗೆ ಬೇಕಾದ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಹಾಗೂ ಇದನ್ನು ಸಕ್ಷಮ ಅಧಿಕಾರಿಯವರಿಂದ ಪರೀಕ್ಷೆ ಪಡೆದು ಫಲಿತಾಂಶವು ಐ.ಎಸ್.ಐ. ಗುಣವನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರನ್ನು ಸಲ್ಲಿಸುವಾಗ ಗಮನಿಸುವುದು.
7. ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್‌ಇಡಿ 2006:ಬೆಂಗಳೂರು: ದಿನಾಂಕ: 18.1.2007ರಂತೆ ಕಡಿತಗೊಳಿಸಲಾಗುವುದು.

ಕಾರ್ಯನಿರ್ವಾಹಕ ಇಂಜಿನಿಯರರು,

ಪಿ.ಆರ್. 663 ಲೋ.ಇ., ಮಂಗಳೂರು ವಿಭಾಗ, ಮಂಗಳೂರು.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ ಸಂಖ್ಯೆ: ಸಿಆಸುಇ 5 ಡಿಎಸ್‌ಡಬ್ಲ್ಯೂ 2007, ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್ 2007**

**ವಿಷಯ:** ವಿಧಾನಸೌಧ ಹಾಗೂ ಬಹುಮಹಡಿ ಕಟ್ಟಡಗಳಲ್ಲಿರುವ ಸಚಿವಾಲಯದ ಉಪಾಹಾರ ಮಂದಿರಗಳನ್ನು ನಡೆಸಲು ಗುತ್ತಿಗೆ ನೀಡುವ ಸಂಬಂಧ ಟೆಂಡರ್ ಕರೆಯುವ ಬಗ್ಗೆ.

ವಿಧಾನಸೌಧ ಮತ್ತು ಬಹುಮಹಡಿ ಕಟ್ಟಡಗಳಲ್ಲಿರುವ ಸಚಿವಾಲಯದ ಉಪಾಹಾರ ಮಂದಿರಗಳನ್ನು ನಡೆಸಲು ಗುತ್ತಿಗೆ ನೀಡುವ ಸಂಬಂಧ ಕರೆಯಲಾಗಿದ್ದ ಟೆಂಡರ್ ಪ್ರಕಟಣೆ ಸಂಖ್ಯೆ: ಸಿಆಸುಇ 5 ಡಿಎಸ್‌ಡಬ್ಲ್ಯೂ 2007, ದಿನಾಂಕ: 17.04.2007ನ್ನು ಬಹುಮಹಡಿ ಕಟ್ಟಡದ ಉಪಾಹಾರ ಮಂದಿರಕ್ಕೆ ಸಂಬಂಧಪಟ್ಟಂತೆ ಈ ಮೂಲಕ ರದ್ದುಗೊಳಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಮಂಜುನಾಥ್**

ಪಿ.ಆರ್. 658 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

**WATER RESOURCES DEPARTMENT**
**(Minor Irrigation)**
**ಸಂಖ್ಯೆ:ಸನೀಇ 04 ಮಸಾವಿ 2007, ದಿನಾಂಕ: 8ನೇ ಅಕ್ಟೋಬರ್ 2007**
**STATE TENDER BULLETIN**

The details of the notices inviting the tender in respect of the Procurement requirements of different procurement entities to be published as a part of the State - Tender Bulletin for the 2nd week of Oct 2007. The details of the published Tender Notification may be obtained from the concerned Executive Engineers who has invited the Tender.

**V. GOVINDARAJ**
State Tender Bulletin Officer and Deputy Secretary to
Government Water Resources Department (M.I.)

**ಜಲಸಂಪನ್ಮೂಲ (ಸಣ್ಣ ನೀರಾವರಿ) ಇಲಾಖೆ**

**ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ವಿಭಾಗ, ಬಳ್ಳಾರಿ**

**ಪ್ರೀಕ್ವಾಲಿಫಿಕೇಶನ್ ಟೆಂಡರ್ ತಿದ್ದುಪಡಿ ಪ್ರಕಟಣೆ**

**ಸಂ: ಕಾನಿಇ/ಸನೀವಿ/ಬ/ಸ.ಇ-1/4702 ಕಾಮಗಾರಿ/2007-08/1813, ದಿನಾಂಕ: 29ನೇ ಸೆಪ್ಟೆಂಬರ್ 2007**

**ವಿಷಯ:** ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಡಣನಾಯಕನಕೆರೆ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ತಿದ್ದುಪಡಿ ಮಾಡುವ ಬಗ್ಗೆ.

**ಉಲ್ಲೇಖ:** ಈ ಕಛೇರಿ ಟೆಂಡರ್ ಪ್ರಕಟಣೆ ಪತ್ರ ಸಂ: 1660/4.9.2007.

ಉಲ್ಲೇಖಿತ ಟೆಂಡರ್ ಪ್ರಕಟಣೆಯನ್ವಯ ಕರೆಯಲಾಗಿದ್ದ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಡಣನಾಯಕನಕೆರೆ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

| ಕ್ರ. ಸಂ. | ವಿವರ | ಈಗಾಗಲೇ ಪ್ರಕಟಣೆಗೊಂಡಂತೆ | ಈಗ ತಿದ್ದುಪಡಿ ಮಾಡಿದಂತೆ |
|---|---|---|---|
| 1 | ಇ.ಎಂ.ಡಿ. ಮಾನ್ಯತೆಯ ಬಗ್ಗೆ | 180 ದಿನಗಳು, ಟೆಂಡರ್ ತೆರೆದ ದಿನಾಂಕದಿಂದ | 135 ದಿನಗಳು, ಟೆಂಡರ್ ತೆರೆದ ದಿನಾಂಕದಿಂದ |

ಇನ್ನುಳಿದಂತೆ ಯಾವುದೇ ಬದಲಾವಣೆಗಳು ಇರುವುದಿಲ್ಲ. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ಕೆಲಸದ ದಿನಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

**ಟಿ. ವೆಂಕಟೇಶ್**
ಕಾರ್ಯನಿರ್ವಾಹಕ ಇಂಜಿನೀಯರರು,
ಸಣ್ಣ ನೀರಾವರಿ ವಿಭಾಗ, ಬಳ್ಳಾರಿ.

ಪಿ.ಆರ್. 659

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಸಣ್ಣ ನೀರಾವರಿ ವಿಭಾಗ, ವಿಜಾಪೂರ**

**ಟೆಂಡರ್ ಪ್ರಕಟಣೆ ತಿದ್ದುಪಡಿ/ಟೆಂಡರ್ ರದ್ದತಿ ಪ್ರಕಟಣೆ**

**ಕ್ರ.ಸಂಖ್ಯೆ:ಕಾನಿಅ:ಸನೀವಿ:ಬಿಜೆಪಿ: ಟೆಂಡರ.ಸ.ಇಂ-2:2007-08/3591, ದಿನಾಂಕ: 13ನೇ ಸೆಪ್ಟೆಂಬರ್ 2007**

**ಕೆಲಸದ ಹೆಸರು:** ಬಾಗಲಕೋಟೆ ಜಿಲ್ಲೆಯ ಮತ್ತು ತಾಲ್ಲೂಕಿನ ಕಲಾದಗಿ ಹತ್ತಿರ ಏತ ನೀರಾವರಿ ಯೋಜನೆಯ ಪುನರುಜ್ಜೀವನ ಕಾಮಗಾರಿ.

**ಉಲ್ಲೇಖ:** ಈ ಕಛೇರಿ ಟೆಂಡರ್ ಪ್ರಕಟಣೆ ಸಮ:ಕಾನಿಅ:ಸನೀವಿ:ಬಿಜೆಪಿ:ಟೆಂಡರ:ಸ.ಇಂ-2:2007-08:2997. ದಿ: 1.8.2007.

ಮೇಲ್ಕಂಡ ಉಲ್ಲೇಖಿತ ಟೆಂಡರ್ ಪ್ರಕಟಣೆಯ ಪ್ರಕಾರ ಈ ವಿಭಾಗದಿಂದ ಕರೆಯಲಾದ ಬಾಗಲಕೋಟೆ ಜಿಲ್ಲೆಯ ಮತ್ತು ತಾಲ್ಲೂಕಿನ ಕಲಾದಗಿ ಹತ್ತಿರ ಏತ ನೀರಾವರಿ ಯೋಜನೆಯ ಪುನರುಜ್ಜೀವನ ಕಾಮಗಾರಿಯ ಟೆಂಡರನ್ನು ತಾಂತ್ರಿಕ ಕಾರಣಗಳಿಂದ ಈ ಮೂಲಕ ರದ್ದುಗೊಳಿಸಲಾಗಿದೆ.

**ಶ್ರೀ ಡಿ.ಎಲ್. ತೇರಗಾಂವ್**
ಕಾರ್ಯನಿರ್ವಾಹಕ ಅಭಿಯಂತರರು,
ಸಣ್ಣ ನೀರಾವರಿ ವಿಭಾಗ, ವಿಜಾಪೂರ.

ಪಿ.ಆರ್. 660

**FORM - 1**
**(See Rule 19)**
**OFFICE OF THE BLOCK EDUCATION OFFICER, DHARWAD TALUKA RANGE**
**NOTIFICATION**

**Shri Virupaksh Malleshappa Guggari** Working as Assistant Teacher in the Govt-Primary School Tegur Tq: Dharwad (Education Department) of Office of the Block Education Officer Dharwad Taluka Rang is permitted to change his name to **Shri: VIRUPAKSH MALLESHAPPA DODAWAD**

Block Education Officer
Taluka Range Dharwad

P.D. 156